ಶ್ರೀ

ಕರ್ನಾಟಕ

ವಚನ

# ಕನ್ಯಕಾಪುರಾಣವು

ಗ್ರಂಥಕರ್ತರು
ವಿದ್ವಾನ್ ಬೇಲೂರು ಕೇಶವದಾಸರು

ಬೆಲೆ ೧—೦—೦

# ಗ್ರಂಥಕರ್ತನ ಮಾತು.

ಕನ್ಯಕಾಪುರಾಣವೆಂದರೆ ವೈಶ್ಯರ ಪುರಾಣ; ಕನ್ಯಕಾಪರಮೇಶ್ವರಿಯೆಂದರೆ ವೈಶ್ಯರ ಕುಲದೇವರು; ಎಂಬಿಷ್ಟೇ ಪರಿಚಯವು ಹಿಂದೂಜನ ಸಮಾಜದಲ್ಲಿರುವದಲ್ಲದೆ ಈ ವಿಷಯದಲ್ಲಿ ಹೆಚ್ಚಾಗಿ ಏನೂ ಗೊತ್ತಾಗಿಲ್ಲ. ಎಲ್ಲವನ್ನೂ ತಿಳಿದಿರಬೇಕಾದ ಪರಮಪೂಜ್ಯ ವೈದಿಕ ಪಂಡಿತರಿಗೆ ಈ ವಿಚಾರದಲ್ಲಿ ಸಂಶೋಧಿಸಲು ತಕ್ಕ ಅವಕಾಶ ದೊರೆತಿಲ್ಲ. ವೈಶ್ಯಗುರುಗಳೋ ಪುರೋಹಿತರೋ ಆಗಿರುವ ವೈದಿಕರಿಗೆ ಕನ್ಯಕಾಪರಮೇಶ್ವರಿಯೆಂದರೆ ಅದೂ ಒಂದು ದೇವತಾ ಅವತಾರವೆಂಬಷ್ಟು ವಿಶ್ವಾಸವಿದೆ. ಯಾರು ಯಾರೆಂದು ವಿಚಾರಿಸುವದಕ್ಕಾಗಲಿ, ಯಾರ ವಿಷಯವನ್ನು ಯಾರು ಬರೆದಿಡುವುದಕ್ಕಾಗಲೀ ತಕ್ಕ ಸಮಯ ಸಮಾಧಾನ ಅನುಕೂಲ ಉತ್ತೇಜನಗಳೆಲ್ಲಾ ಬೇಕು. ಇವೆಲ್ಲದರ ಅಭಾವವೇ ಈ ಪರಿಸ್ಥಿತಿಗೆ ಕಾರಣ.

ಜಗತ್ಸೃಷ್ಟ್ಯಾದಿಯಿಂದಲೂ ಭರತಖಂಡದಲ್ಲಿ ಸಮಾಜಸುಧಾರಣೆಯು ನಡೆದುಬರುತ್ತಲಿದೆ. ಕಾಲಕಾಲಕ್ಕೆ ಧರ್ಮಕರ್ಮ ಸ್ವರೂಪಗಳು ಬದಲಾಗಿವೆ. ಈಗಿನವರ ದೃಷ್ಟಿಯಿಂದ ಇದು ನಿದಾನವೆಂದು ಕಾಣುತ್ತಿದೆ ಆದರೆ ಈ ನಿದಾನವು ವ್ಯಕ್ತಿಯ ಗುಣಕರ್ಮಗಳ ಅಭಿವ್ಯಕ್ತಿಗೆ ಅನುಕೂಲವಾಗಿದೆ. ವ್ಯಕ್ತಿಯ ಗುಣಕರ್ಮಸ್ವರೂಪ ನಿರ್ಣಯವೇ ಬ್ರಾಹ್ಮಣಾದಿ ವರ್ಣರಚನೆ. ಗುಣಕರ್ಮಗಳೆರಡರಿಂದ ವರ್ಣನಿರ್ಣಯವಾಗಿರುವದು ಭರತಖಂಡದಲ್ಲಿ ಮಾತ್ರ. ಈಗಿರುವ ವರ್ಣಗಳಲ್ಲಿ ಗುಣಕರ್ಮಗಳ ವ್ಯತ್ಯಾಸ ಕಂಡುಬರುತ್ತಿರುವದು ನಿಜ. ಆದರೆ

ಇದು ಸಾರ್ವತ್ರಿಕವಾಗಿಲ್ಲ. ಕೆಟ್ಟಿರುವದನ್ನು ನೆಟ್ಟಗೆಮಾಡುವದು ಬುದ್ಧಿವಂತಿಕೆ. ಸಮಾಜಸುಧಾರಣೆಯೆಂಬ ಹೆಸರಿನಿಂದ ವರ್ಣಾಶ್ರಮ ಧರ್ಮಗಳನ್ನು ನಾಶಮಾಡುವದು ಯೋಗ್ಯವಲ್ಲ ಅಜ್ಞಾನು ಪ್ರಾಜ್ಞನಾಗಿಲ್ಲವೆಂದು ಪ್ರಾಜ್ಞನ ತಲೆಯೊಡೆಯುವದು ಸುಧಾರಣೆಯಲ್ಲ. ಅಜ್ಞನನ್ನು ಪ್ರಾಜ್ಞನನ್ನಾಗಿ ಮಾಡಿದರೆ ಅದೀಗ ಸುಧಾರಣೆ. ನಮ್ಮದು ಸನಾತನಧರ್ಮ. ನಮ್ಮ ಧರ್ಮಗ್ರಂಥ ವೇದ. ಅದು ಅಪೌರುಷೇಯು. ಅಂದರೆ ಪುರುಷಕೃತ ದೋಷರಹಿತ. ನಮ್ಮ ಕಾಲವು ಅನಂತ. ಎರಡುಸಾವಿರ ವರ್ಷಗಳ ಹಿಂದೆ ಸನಾತನಧರ್ಮವಲ್ಲದೆ ಬೇರೊಂದು ಧರ್ಮವೇ ಇರಲಿಲ್ಲ. ಅದು (ಸನಾತನಧರ್ಮವು) ಈಗಿನ ಎಲ್ಲಾ ಪ್ರಪಂಚವನ್ನೂ ಆವರಿಸಿತ್ತು. ಸ್ಮೃತಿಕಾರರ ಕಾಲದಲ್ಲಿ ಇತರ ದೇಶೀಯರನ್ನೆಲ್ಲಾ ಅವರು ಬಹಿಷ್ಕರಿಸುತ್ತ ಬಂದರು. ಅದರಿಂದವರು ನಿರಾಶರಾಗಿ ನಾಸ್ತಿಕರಾದರು. ಅಂಥವರ ಉದ್ಧಾರದ ಹೆಸರಿನಿಂದ ಎರಡುಸಾವಿರ ವರ್ಷಗಳಿಂದೀಚೆಗೆ ಇಸಾಯಿ ಇಸ್ಲಾಂ ಮೊದಲಾದ ಮತಗಳೇರ್ಪಟ್ಟವು. ಈ ಧರ್ಮಗಳು ಸನಾತನಧರ್ಮದ ವಿರೋಧಿಗಳಾದವು. ಈ ಧರ್ಮಗಳೇನಿದ್ದರೂ ಪುರುಷಕೃತಗಳು. ಆದ್ದರಿಂದ ಪುರುಷಕೃತ ದೋಷಗಳು ಅವುಗಳಲ್ಲಿಲ್ಲವೆಂದು ಹೇಳುವದಕ್ಕಾಗುವದಿಲ್ಲ. ಇವರು ಜನ್ಮಾಂತರಗಳನ್ನೊಪ್ಪಲಿಲ್ಲ. ಇವರು ಹಿಂದೆ ಹುಟ್ಟಲಿಲ್ಲ—ಮುಂದೆ ಹುಟ್ಟುವದಿಲ್ಲ. ಇಂಥವರ ಸ್ವರ್ಗನರಕಗಳು ಇದೊಂದೇ ಜನ್ಮದಲ್ಲಿ ನಿರ್ಣಯವಾಗಬೇಕಾಯಿತು ಇಂಥಾ ಧರ್ಮಗಳು ಹುಟ್ಟುವದಕ್ಕೆ ಮೊದಲು ಹುಟ್ಟಿ ಸತ್ತವರ ಗತಿಯೇನಾಯಿತೋ ದೇವರೇ ಬಲ್ಲ! ಇಂತಹ ಸಂಕುಚಿತ ಭಾವನೆ ಸಂಕುಚಿತ ಕಾಲವುಳ್ಳವರಿಗೆ ಗುಣವೆಂದರೇನೋ ಕರ್ಮವೆಂದರೇನೋ! ಗುಣಕರ್ಮ ವಿಭಾಗಗಳಿಂದ ಸೃಷ್ಟವಾದ ವರ್ಣಗಳೆಂದರೇನೋ! ಹೇಗೆತಾನೇ ಗೊತ್ತಾಗಬೇಕು? ಆದ್ದರಿಂದ ನಮ್ಮ ವರ್ಣಾಶ್ರಮ ಧರ್ಮಗಳನ್ನಿವರು ಅಪಾರ್ಥಮಾಡಿಕೊಂಡಿರುವರು.

ಇಂಥವರ ಮೋಹಜಾಲದಲ್ಲಿ ಸಿಕ್ಕಿರುವ ನಮ್ಮವರೂ ಹೀಗೆಯೇ ಅಭಿಪ್ರಾಯಪಡುವರು.

ವರ್ಣಾಶ್ರಮ ವಿಭಾಗವೆಂದರೆ— ಒಬ್ಬರು ಹೆಚ್ಚು, ಒಬ್ಬರು ಕಡಮೆ, ಎಂದು ತೂಕಮಾಡುವ ಕಾಲ್ಪನಿಕ ಜಾತಿಜಗಳವಲ್ಲ. ಮಾತೆತ್ತಿದರೆ ಜಾತಿ ಕೆಟ್ಟಿತೆಂಬ ಮಾತಿನ ಚಲಾವಣೆ ನಮ್ಮಲ್ಲಿ ಬಲು ಕಾಲದಿಂದ ಇದೆ. ಜಾತಿ ಕೆಡುವದೆಂಬ ಮಾತಿಗೆ ಅರ್ಥವಿಲ್ಲ. ಗಂಡಸು ಹೆಂಗಸಾದರೆ ಜಾತಿಕೆಟ್ಟಿತು. ಮನುಷ್ಯನು ಮೃಗವಾದರೆ ಜಾತಿ ಕೆಟ್ಟಿತು. ಹಾಗಿದ್ದರೆ ಕೆಡುವದ್ಯಾವದು ? ಜಾತಿಯೆಂಬುವದು ಕೆಡುವದಲ್ಲ. ಕೆಡುವದು ಮತ. ಮತವೆಂದರೆ ಅಭಿಪ್ರಾಯ. ಮತ್ತೂ ಕೆಡುವದ್ಯಾವದು ? ಆಚಾರ. ಆಚಾರವೆಂದರೆ ಆಹಾರವಿಹಾರಪದ್ಧತಿ. ಇಂಥಾ ಮತ ಮತ್ತು ಆಚಾರಗಳು ಕೆಟ್ಟಾಗ ಜನರು ಜಾತಿಕೆಟ್ಟಿತೆಂಬ ದೊಡ್ಡಶಬ್ದವನ್ನುಪಯೋಗಿಸುವರು.

ಶಾಸ್ತ್ರೀಯ ವರ್ಣಾಶ್ರಮ ಧರ್ಮರಚನೆಯೆಂದರೆ—ಒಬ್ಬೊಬ್ಬರೂ ತಮ್ಮ ಯೋಗ್ಯತೆಗನುಗುಣವಾಗಿ ಒಂದೊಂದು ಕೆಲಸಮಾಡಿ ಏಕಗೃಹಕೃತ್ಯದಂತೆ ಜಗತ್ಸಂಸಾರವನ್ನು ನಿರ್ವಹಿಸುವದು. ಇದಕ್ಕಿಂತ ಹೆಚ್ಚಿನದೇನಿಲ್ಲ. ಜಾತಿಜಗಳವೆಂಬುವದು ನಮ್ಮ ವರ್ಣಾಶ್ರಮಗಳ ಅರ್ಥವಾಗಿದ್ದರೆ ಕ್ಷತ್ರಿಯರಲ್ಲಿ ಜನ್ಮತಾಳಿದ ರಾಮಕೃಷ್ಣರು ಬ್ರಾಹ್ಮಣರ ದೇವರಾಗುತ್ತಿರಲಿಲ್ಲ. ಕುರುಬರ ಕನಕನು ಭಾಗವತೋತ್ತಮನೆನಿಸುತ್ತಿರಲಿಲ್ಲ. ಅಂತ್ಯಜ ಆಳ್ವಾರರು ಆಚಾರ್ಯರೆನಿಸುತ್ತಿರಲಿಲ್ಲ ಜಾತಿಯ ಹೆಸರಿನ ಜಗಳವೇನಿದ್ದರೂ ಈಚಿನದು. ನಮ್ಮಲ್ಲಿ ಭೇದಹುಟ್ಟಿಸಿ ತಮ್ಮ ಕಾರ್ಯಸಾಧನೆಮಾಡಿಕೊಳ್ಳಲು ವಿಧರ್ಮಿಗಳು ಮಾಡಿಟ್ಟದ್ದು ಇದಕ್ಕೊಳಗಾಗುವವರು ಮೂಢರು. ವರ್ಣಾಶ್ರಮ ಧರ್ಮಗಳ ನಿಜತತ್ವವರಿತ ಹಿಂದಿನ ರಾಜರೆಲ್ಲಾ ವರ್ಣಾಶ್ರಮಧರ್ಮ ಪರಿಪಾಲಕರಾಗಿದ್ದರು. ವರ್ಣಾಶ್ರಮಧರ್ಮ ಪರಿಪಾಲನೆಯನ್ನೇ

ಅವರು ರಾಜ್ಯಪರಿಪಾಲನೆಯೆಂದು ತಿಳಿದಿದ್ದರು. ಇದಕ್ಕಾಗಿ ಅವರು ತಮ್ಮ ತನುಮನ ಧನಗಳನ್ನು ಧಾರೆಯೆರೆದರು. ಈಚಿನ ಕಾಲದ ಶಿವಾಜಿ ಮಹಾರಾಜನೂ ಈ ಮಾರ್ಗದಲ್ಲೇ ಹೊರಟು ಯಶಸ್ವಿಯಾದನು.

ಪ್ರಕೃತ ಕನ್ಯಕಾಪರಮೇಶ್ವರಿಯ ಅವತಾರವಾದರೋ — ಇಂಥಾ ವರ್ಣಾಶ್ರಮಧರ್ಮ ಪರಿಪಾಲನೆಗೋಸ್ಕರವಾದದ್ದು. ಭರತ ಖಂಡದ ಸ್ತ್ರೀಯರ ಪಾವಿತ್ರ್ಯದ ಪರಮಾವಧಿಯನ್ನು ತೋರಿಸುವದಕ್ಕಾದದ್ದು. ಭರತಖಂಡದ ಸ್ತ್ರೀಯರು ಆಸೆ ಭಯ ಮೋಸಗಳಿಗೊಳಗಾಗಿ ಧರ್ಮಭ್ರಷ್ಟರಾಗಬಾರದೆಂದು ಎಚ್ಚರಿಸುವದಕ್ಕಾದದ್ದು. ಪ್ರಸಂಗ ಬಂದಾಗ ತಮ್ಮ ಪ್ರಾಣವನ್ನಾದರೂ ತ್ಯಜಿಸಿ ಮಾನರಕ್ಷಣೆ ಮಾಡಿಕೊಳ್ಳಬೇಕೆಂದು ತೋರಿಸಿಕೊಡುವದಕ್ಕಾದದ್ದು. ರಾಜರು ದುಷ್ಟರಾದರೆ—ಅಂಥವರನ್ನು ಖಂಡಿಸಿ ದಂಡಿಸಿ, ಧರ್ಮಸಂಸ್ಥಾಪನೆ ಮಾಡುವದಕ್ಕಾದದ್ದು. ಕನ್ಯಕಾಪರಮೇಶ್ವರಿಯು ವೈಶ್ಯರಿಗೆ ಮಾತ್ರ ದೇವರಲ್ಲ. ಭರತಖಂಡಕ್ಕೇ ದೇವರು. ದೇವತಾಗುಣಗಳುಳ್ಳ ಸ್ತ್ರೀ ಪುರುಷರನ್ನು ದೇವರೆಂದು ಕರೆಯದವರಾರು ?

ಕನ್ನಿಕೆಯ ಅವತಾರವಾಗಿ ಎರಡುಸಾವಿರ ವರ್ಷಗಳಾಗಿರಬಹುದು. ಆ ಕಾಲದಲ್ಲಿ ಬೌದ್ಧ ಚಾರ್ವಾಕ ಮತಗಳು ಖಿಲವಾಗುತ್ತಿದ್ದವು. ದಕ್ಷಿಣದೇಶದಲ್ಲಿ ವೇದಮತವೆಂಬ ಹೆಸರಿನ ವಾಮಾಚಾರದ ತಾಂತ್ರಿಕಮತಗಳು ತಲೆಯೆತ್ತಿದ್ದವು. ಆಗಿನ ರಾಜರು ಅದೇ ಮತಾವಲಂಬಿಗಳಾಗಿದ್ದರು. ಅವರು ಪ್ರಜೆಗಳನ್ನೂ ತಮ್ಮ ಮತಾವಲಂಬನೆ ಮಾಡಬೇಕೆಂದು ಪೀಡಿಸುತ್ತಿದ್ದರು. ಇಂಥವರಲ್ಲಿ ವಿಷ್ಣುವರ್ಧನನೆಂಬ ದುಷ್ಟರಾಜನು ಬಲು ಬಲಶಾಲಿಯಾಗಿದ್ದನು. ಇವನ ಬಾಧೆಯಿಂದ ವೈಶ್ಯರು ದೇಶಾಂತರ ದ್ವೀಪಾಂತರಗಳಿಗೆ ಹೋಗಿ ನೆಲೆಸಬೇಕಾಯಿತು. ವಿಷ್ಣುವರ್ಧನನೆಂದರೆ ಹೊಯ್ಸಳ ವಿಷ್ಣುವರ್ಧನ

ನಲ್ಲ. ಇವನು ಆಂಧ್ರದೇಶೀಯನು. ಇವನು ವಿಷ್ಣುದ್ವೇಷಿಯಾಗಿದ್ದನು. ಎಷ್ಟೋ ವಿಷ್ಣುದೇವಾಲಯಗಳನ್ನು ನೆಲಸಮಮಾಡಿಸಿದ್ದನು. ಸ್ಮೃತ್ಯರ್ಥನನೆಂದರೆ ಸ್ಮೃತ್ಯಭೇದಕನೆಂದು ಅರ್ಥಮಾಡುವಂತೆ ವಿಷ್ಣುವರ್ಧನನೆಂದರೆ ವಿಷ್ಣುದೇವಾಲಯಗಳ ಭೇದಕನೆಂದು ಇವನ ಹೆಸರನ್ನು ಅನ್ವರ್ಥಮಾಡಬೇಕು. ಆದರೆ ಇವನು ನಾಸ್ತಿಕನಾಗಿರಲಿಲ್ಲ. ಶಿವಪುರಾಣಗಳಲ್ಲೂ ಶೈವಾಗಮಗಳಲ್ಲೂ ಇವನಿಗೆ ಪರಮಭಕ್ತಿಯಿತ್ತು. ಇವನು ತನ್ನ ರಾಜ್ಯವನ್ನು ತ್ರಿಲಿಂಗದೇಶವನ್ನಾಗಿ ಮಾಡಲು ಯತ್ನಿಸಿದನು. ತ್ರಿಲಿಂಗದೇಶವೆಂದರೆ ಮೂರುಕೋಟಿ ಶಿವಾಲಯಗಳ ದೇಶ. ಈಗಲೂ ಆಂಧ್ರದೇಶದ ಒಂದುಭಾಗವನ್ನು ತ್ರಿಲಿಂಗದೇಶವೆಂದು ಕರೆಯುವ ರೂಢಿಯಿದೆ

ಈ ವಿಷ್ಣುವರ್ಧನನು ವಿಷ್ಣುಭಕ್ತರಾಗಿದ್ದ ವೈಶ್ಯರನ್ನು ದಂಡಿಸಿ ಬಲಾತ್ಕಾರವಾಗಿ ಕನ್ನಿಕೆಯನ್ನಪಹರಿಸಲು ಪ್ರಯತ್ನಿಸಿದನು. ಕನ್ನಿಕೆಯಾದರೋ—ಜನಾರ್ದನಸ್ವಾಮಿಯನ್ನೇ ಲಗ್ನಮಾಡಿಕೊಳ್ಳುವೆನೆಂಬ ವೀರಪ್ರತಿಜ್ಞೆಯುಳ್ಳವಳಾಗಿದ್ದಳು. ರಾಜನ ಕಪಟಸಂಧಾನಗಳಿಗೆ ಕನ್ನಿಕೆಯು ಮರುಳಾಗಲಿಲ್ಲ ವಿಷ್ಣುವರ್ಧನನ ದೃಷ್ಟಿಪಾತದಿಂದ ಅಪವಿತ್ರನಾದ ತನ್ನ ದೇಹವನ್ನೇ ತ್ಯಜಿಸಿ ಶ್ರೀಹರಿಯ ಪಾದಾರವಿಂದವನ್ನು ಸೇರುವೆನೆಂದು ನಿಶ್ಚಯಿಸಿದಳು. ಈಕೆಯನ್ನು ದೇವತಾಸ್ವರೂಪಳೆಂದು ತಿಳಿದ ನೂರೆರಡು ಗೋತ್ರದ ದಂಪತಿಗಳು ತಾವೂ ಕನ್ನಿಕೆಯ ಜೊತೆಯಲ್ಲಿ ಅಗ್ನಿಪ್ರವೇಶಮಾಡಲು ಸಿದ್ಧರಾದರು. ಅಗ್ನಿಪ್ರವೇಶ ಕಾಲದಲ್ಲಿ ಕನ್ನಿಕೆಯು ವೈಶ್ಯರಿಗೆ ಮಾಡಿದ ಉಪದೇಶವು ಅಮೋಘವಾದದ್ದು. ಈಕೆಯ ಅಗ್ನಿಪ್ರವೇಶದ ಚಿತ್ರವನ್ನು ನೋಡಿದರೆ, ಮುಸಲ್ಮಾನರಾಜರ ಕಾಲದಲ್ಲಿ ರಾಜಪುತ್ರಸ್ತ್ರೀಯರು ತಮ್ಮ ಮಾನರಕ್ಷಣೆಗಾಗಿ ಜೋಹಾರ್ (ಅಗ್ನಿಪ್ರವೇಶ) ಮಾಡಿದ ನೆನಪು ಬರುತ್ತದೆ.

ಕನ್ನಿಕೆಯ ಅವತಾರಚರಿತ್ರೆಯು ಇತರ ಪುರಾಣಚರಿತ್ರೆಗಳಂತೆ ಉತ್ಸಾಹಜನಕವಾಗಿಲ್ಲ. ಕನ್ನಿಕೆಯ ಜನ್ಮವು ಕೇವಲ ವಿಷಾದಾಂತ ನಾಟಕವಾಯಿತು. ಅಂದಿನಿಂದ ಕನ್ನಿಕೆಯ ಜೊತೆಯಲ್ಲಿ ಅಗ್ನಿಪ್ರವೇಶ ಮಾಡಿದ ನೂರೆರಡು ಗೋತ್ರದವರು ತಾವೇ ಪ್ರತ್ಯೇಕ ಸಂಗಡವಾಗಿ ನಿಂತರು. ಈಗಲೂ ಈ ವೈಶ್ಯರು ಕನ್ನಿಕೆಯ ಆಜ್ಞೆಯಂತೆ ನಡೆಯು ತ್ತಿದ್ದಾರೆ. ಕನ್ನಿಕೆಯನ್ನು ಲಕ್ಷ್ಮಿಯೆಂದು ಆಲಯಗಳಲ್ಲಿ ಪ್ರತಿಷ್ಠಿಸಿ ಪೂಜಿಸುತ್ತಿದ್ದಾರೆ.

೫೦೩೫ ವರ್ಷಗಳು ಕಳೆದ ಈ ಕಲಿಯುಗದಲ್ಲಿ ಕೃತ ತ್ರೇತ ದ್ವಾಪರಗಳಂತೆ ಯಾವ ಭಗವದವತಾರವೂ ಆಗಲಿಲ್ಲ. ಸೀತಾ ರುಕ್ಮಿಣೀಕಲ್ಯಾಣಗಳಂತೆ ಯಾವ ಶ್ರೀಹರಿ ಕಲ್ಯಾಣಮಹೋತ್ಸವ ಗಳೂ ನೆರವೇರಲಿಲ್ಲ. ಆದರೇನು? ಆ ಪರಮಾತ್ಮನ ದಿವ್ಯಚರಿತ್ರ ಶ್ರವಣಮಾತ್ರದಿಂದ ಸೀತಾರುಕ್ಮಿಣಿಯರಂತೆ ಆ ಸ್ವಾಮಿಯನ್ನೇ ಲಗ್ನಮಾಡಿಕೊಳ್ಳುವೆವೆಂದು ಪ್ರತಿಜ್ಞೆಮಾಡಿ, ಶಿಲಾಮೂರ್ತಿಗಳಿಂದ ಲೇ ಶ್ರೀಹರಿಯನ್ನು ಪ್ರತ್ಯಕ್ಷೀಕರಿಸಿಕೊಂಡು ಆತನನ್ನೇ ವಿವಾಹ ಮಾಡಿಕೊಂಡ ದಿವ್ಯಚರಿತ್ರೆಗಳಿಗೆ ಕಡಮೆಯಾಗಲಿಲ್ಲ. ಅಂಥಾ ಸ್ತ್ರೀ ಯರ ಜನ್ಮಮಾತ್ರದಿಂದ ಕಲಿಯುಗವು ಧರ್ಮಯುಗವಾಯಿತ. ಸ್ತ್ರೀಜಾತಿಯು ಪಾವನವಾಯಿತು.

ಹೀಗೆ ಲಕ್ಷ್ಮೀಸ್ವರೂಪರೆನಿಸಿದ ಸ್ತ್ರೀಯರಲ್ಲಿ ಶ್ರೀವಿಲಿಪುತ್ತೂ ರಿನ (Ramnad Dist.) ಗೋದಾದೇವಿಯೊಬ್ಬಳು ಈಕೆಯು ತಾನು ಮುಡಿದ ಹೂವನ್ನೇ ಸ್ವಾಮಿಗೆ ಭಕ್ತಿಯಿಂದ ಸಮರ್ಪಿಸುತ್ತಾ 'ಶೂಡಿಕುಡುತ್ತ ನಾಚಿಯಾರ್' ಎಂಬ ಪ್ರಸಿದ್ಧಿಪಡೆದಳು. ಈಕೆಯ ಹೆಸರಿನಮೇಲೆ ದಿವ್ಯದೇವಾಲಯವೇರ್ಪಟ್ಟಿರುವದು. ಲಕ್ಷಾವಧಿ ಜನರು ದೇವಿಯ ಸಂದರ್ಶನಕ್ಕೆ ಈಗಲೂ ಬರುವರು. ದಕ್ಷಿಣ ದೇಶದ ವಿಷ್ಣುದೇವಾಲಯಗಳಲ್ಲಿ ಗೋದಾದೇವಿಯ ವಿಗ್ರಹವಿಲ್ಲದೆ—

ಈಕೆಯು ಹಾಡಿದ ಸ್ತೋತ್ರಗಳನ್ನು ಹಾಡದೆ—ಇವತ್ತಿಗೂ ಆರಾಧನೆ ಪೂರ್ತಿಯಾಗುತ್ತಿಲ್ಲ.

ಮತ್ತೆ ಸಂಢರಪುರದ ಒಬ್ಬ ವೈಶ್ಯಸಾಹುಕಾರನ ಮಗಳಾಗಿ ಪಾಂಡುರಂಗನನ್ನು ಲಗ್ನಮಾಡಿಕೊಂಡ ರುಕುಮಾಯಿಯೊಬ್ಬಳು. ಸತಲರುಕುಮಾಯಿಯೆಂದು ಹಾಡದ ನಾಲಿಗೆಯೇ ಹಿಂದೂಜನ ಸಾಮಾನ್ಯದಲ್ಲಿಲ್ಲವೆನ್ನುವಾಗ ಈಕೆಯ ಮಹಿಮೆಯನ್ನು ಹೇಳುವದೇನು?

ಇವರಿಬ್ಬರಂತೆ ಮಹಾದ್ರಿಪುರದ ಕುಸುಮಶೆಟ್ಟಿಯ ಮಗಳಾದ ಕನ್ಯಕಾಪರಮೇಶ್ವರಿ. ಮಹಾದ್ರಿಪುರದ ಜನಾರ್ದನಸ್ವಾಮಿಯನ್ನೇ ಲಗ್ನಮಾಡಿಕೊಳ್ಳುವೆನೆಂದು, ಅಗ್ನಿಮುಖದಿಂದ ಶುದ್ಧಳಾಗಿ ಶ್ರೀಜನಾರ್ದನ ಸ್ವಾಮಿಯ ವಕ್ಷಸ್ಥಳದಲ್ಲಿ ಶೋಭಿಸುವವಳು. ಈಕೆಯ ದೇವಾಲಯವಿಲ್ಲದ ವೈಶ್ಯರ ಊರೇ ದಕ್ಷಿಣಭಾರತದಲ್ಲಿಲ್ಲ. ಪ್ರತಿ ಶುಕ್ರವಾರವೂ ಈಕೆಯ ದರ್ಶನಮಾಡದೆ - ಕಾಣಿಕೆಯನ್ನೊಪ್ಪಿಸದೆ - ಅನ್ನೋದಕಗಳನ್ನು ತೆಗೆದುಕೊಳ್ಳುವ ವೈಶ್ಯನೂ ಇಲ್ಲ.

ಕನ್ಯಕಾಪರಮೇಶ್ವರಿಯ ಮಹಿಮೆಯು ಸೂಕ್ಷ್ಮವಾಗಿ ಸ್ಕಾಂದ ಪುರಾಣದಲ್ಲಿ ವರ್ಣಿತವಾಗಿದೆ ಕಥೆಗೆ ಪೀಠಿಕೆಯಾಗಿ ದಾಕ್ಷಾಯಿಣಿಯ ಅಗ್ನಿಪ್ರವೇಶ ಚರಿತ್ರೆಯೂ ಸೇರಿದೆ. ಆದಕಾರಣ ಕನ್ನಿಕೆಯ ಕಥೆಯು ಸಂಕೋಚವಾಗಿ ಹೋಗಿದೆ. ಬ್ರಹ್ಮಾಂಡ ಪುರಾಣದಲ್ಲಿ ಕನ್ಯಕಾಪುರಾಣವು ಒಂಭತ್ತು ದೊಡ್ಡ ಅಧ್ಯಾಯಗಳಾಗಿ ವಿವರವಾಗಿದೆ. ಕಥೆಯು ಭವಿಷ್ಯತ್ಪ್ರಶಂಸೆಯೆನಿಸಿ ಶಾಲಂಕಾಯನ ವೈಶ್ಯ ಸಂವಾದ ರೂಪವನ್ನು ತಾಳಿದೆ. ಇದರ ಮೇಲೆ ಆಧಾರವಿಲ್ಲದೆ ಒಂದೊಂದು ದೇಶದಲ್ಲಿ ಒಂದೊಂದು ರೀತಿಯ ದಂತಕಥೆಗಳ ಪ್ರಚಾರವಿದ್ದು ಮರೆತುಹೋಗುತ್ತಲಿದೆ. ಇವೆಲ್ಲವನ್ನೂ ನೋಡಿ, ದಂತಕಥೆ

ಗಳ ಕಡೆಗೆ ಗಮನಕೊಡದೆ, ಅಚ್ಚಾಗಿರುವ ಸ್ಕಾಂದಪುರಾಣಾಂತರ್ಗತ ಪುರಾಣ ವಿಮರ್ಶೆಗೂ ಹೋಗದೆ, ಮಹಾದ್ರಿಪುರದ ಶ್ರೀಜನಾರ್ದನ ಸ್ವಾಮಿಯ ದೇವಸ್ಥಾನದಲ್ಲಿರುವ ಮೂಲಪ್ರತಿಯ ಆಧಾರದಿಂದ ನಮ್ಮ ಪೂರ್ವೀಕರು ಸಂಗ್ರಹಿಸಿದ ಹಸ್ತಪ್ರತಿಯನ್ನನುಸರಿಸಿ ಈ ಗ್ರಂಥವನ್ನು ಕನ್ನಡ ವಚನರೂಪವಾಗಿ ಬರೆಯಲಾಗಿದೆ. ಈ ಮೂಲ ಪ್ರತಿಯು ೧೮೬೯ನೇ ಕ್ರಿಸ್ತಾಬ್ದದಲ್ಲಿ ಚಕ್ರವರ್ತಿ ನೃಸಿಂಹಾಚಾರ್ಯರೆಂಬ ದೀಕ್ಷಿತರಿಂದ ಮದ್ರಾಸಿನಲ್ಲಿ ಮುದ್ರಿತವಾಗಿತ್ತು. ಅವರು ೫೦೦ ಪ್ರತಿಗಳನ್ನು ಮಾತ್ರ ಮುದ್ರಿಸಿದ್ದರು. ಮತ್ತೆ ಮುದ್ರಣದ ಪುನರಾವರ್ತಿಯಾಗಲಿ, ಗ್ರಂಥದ ಭಾಷಾಂತರವಾಗಲಿ ಎಲ್ಲೂ ಆದಂತೆ ಕಂಡುಬಂದಿಲ್ಲ.

ಈ ಗ್ರಂಥವನ್ನು ವೈಶ್ಯಮಹಾಜನರಲ್ಲಿ ಹೆಚ್ಚು ಪರಿಚಯವನ್ನು ಪಡೆದು ಅವರ ಆಚಾರ ವಿಚಾರಗಳನ್ನರಿತವರ್‍ಯಾರಾದರೂ ಬರೆದಿದ್ದರೆ ಚನ್ನಾಗಿತ್ತು. ಆರ್ಯವೈಶ್ಯ ಮಹಾಸಭೆಯವರಾದರೂ ವಿಶೇಷ ಪರಿಶೀಲನೆಯಿಂದ ಪಂಡಿತೋತ್ತಮರಿಂದ ಬರೆಸಿದ್ದರೆ ಚನ್ನಾಗಿರುತ್ತಿತ್ತು. ಎರಡೂ ಇಲ್ಲದೆ ಅಪಂಡಿತನಾದ ನಾನು ಬರೆದಿರುವದರಿಂದ ತಪ್ಪುಗಳಿದ್ದಾವೆಂಬ ಸಂಶಯ ನನಗಾಗುತ್ತಲಿದೆ. ಏನೂ ಇರದಿರುವದಕ್ಕಿಂತ ತಪ್ಪಾದ ಪುಸ್ತಕವಾದರೂ ಹೊರಬೀಳಲಿ; ಪ್ರಾಜ್ಞರು ವಿಮರ್ಶೆಮಾಡಲಿ; ಸರಿಯಾದ ಗ್ರಂಥವಾದರೂ ಹೊರಡಲಿ; ಆದರಿಂದ ಸಮಾಜಸೇವೆಯಾಗಲಿ; ಎಂಬ ಅಭಿಪ್ರಾಯದಿಂದ ಮಾತ್ರ ಬರೆದಿರುವೆನು.

ಈ ಗ್ರಂಥರಚನೆಗೆ ಮುಖ್ಯಕಾರಣರು ನನ್ನ ಪರಮಮಿತ್ರ ಶ್ರೀಮಂತ ಖರೀದಿ ಸತ್ಯನಾರಾಯಣ ಶೆಟ್ಟರು. ಪ್ರಾಯಶಃ ನನ್ನ ಮಿತ್ರರ ಹೆಸರನ್ನು ಕೇಳದ ಕನ್ನಡಿಗನೇ ಕರ್ನಾಟಕದಲ್ಲಿಲ್ಲವೆಂದರೆ ತಪ್ಪಾಗುವದಿಲ್ಲ. ಬೀರೂರ ಬಂಗಲೆಯಲ್ಲಿ (Travellers'

Bungalow) ನಾನಿಳಿದಿದ್ದಾಗ ಯಾವದೋ ಪ್ರಸ್ತಾಪದಲ್ಲಿ ಶೆಟ್ಟರು ಕನ್ಯಕಾಪುರಾಣದ ಸಂಗತಿಯನ್ನು ತೆಗೆದರು. ಮಾತಿನಮೇಲೆ ಮಾತುಬೆಳೆದು ಆರ್ಯವೈಶ್ಯಧರ್ಮ ಜಿಜ್ಞಾಸೆಗಾರಂಭವಾಯಿತು. ನನ್ನ ಬಳಿಯಿರುವ ಕನ್ಯಕಾಪುರಾಣದ ಚರಿತ್ರಾಂಶವನ್ನು ಅವರಿಗೆ ಸಂಕ್ಷೇಪ ವಾಗಿ ತಿಳಿಸಿದೆನು. ಶೆಟ್ಟರು ಪುರಾಣವು ಸಂಸ್ಕೃತಭಾಷೆಯಲ್ಲಿರುವದ ರಿಂದ ಅದನ್ನು ಕನ್ನಡಕ್ಕೆ ಭಾಷಾಂತರಮಾಡಬೇಕೆಂದರು. ಭಾಷಾಂ ತರವನ್ನು ಯಾರಾದರೂ ಮಾಡಿದರೆ ಅವರಿಗೆ ಮೂಲಪ್ರತಿಯನ್ನು ಕೊಡುವೆನೆಂದು ನಾನು ವಿಜ್ಞಾಪಿಸಿದೆನು. ಶೆಟ್ಟರು, ಹಾಗಾಗದು, ಆ ಕೆಲಸವನ್ನು ನೀನೇ ಮಾಡಬೇಕೆಂದರು. ಅವರ ಮಾತನ್ನು ಮೀರಲು ನನಗೆ ಸಾಧ್ಯವಾಗಲಿಲ್ಲ. ನನಗೆ ತಿಳಿದಂತೆ ಪುರಾಣವನ್ನು ಮುಂದಿಟ್ಟುಕೊಂಡು ಕನ್ನಡ ಶೈಲಿಯಲ್ಲಿ ಬರೆದೆನು. ಬರೆದಿರುವದ ರಲ್ಲಿ ಇರಬಹುದಾದ ದೋಷಗಳು ನನ್ನವು. ಈ ಗ್ರಂಥಪ್ರಚಾರ ದಿಂದ ವೈಶ್ಯಮಹಾಜನಗಳಿಗೆ ಉಪಯೋಗವೇನಾದರೂ ಆದರೆ ಆ ಪುಣ್ಯ ಶೆಟ್ಟರದು.

## ಯಾರಿಗೆ ಈ ಪುಸ್ತಕ?

ಪಂಡಿತರಿಗಾಗಿ ಬರೆದ ಪುಸ್ತಕವಿದಲ್ಲ. ಹೈತುಕರೂ ನಾಸ್ತಿಕರೂ ಓದುವ ಪುಸ್ತಕವಿದಲ್ಲ. ಲೇಖಕನ ಸಂವಿಧಾನ ಪರೀಕ್ಷೆಮಾಡಬೇ ಕೆಂಬುವರಿಗೆ ಇದು ಕೇವಲ ಭಾಷಾಂತರವಾದ್ದರಿಂದ ಉಪಯೋಗ ವಿಲ್ಲ. ಹಳೆಯದನ್ನು ಳಿಸಿಕೊಂಡು ಇಳೆಯಲ್ಲಿ ಬಾಳಬೇಕೆಂಬುವರಿಗೆ ಮಾತ್ರ ಈ ಪುಸ್ತಕ.

ಗ್ರಂಥಕರ್ತ.



# ಉಪೋದ್ಘಾತ ಪ್ರಕರಣ.

**ದೇವರೊಬ್ಬನಿದ್ದಾನೆ.** ಅವನು ಆದಿಮಧ್ಯಾಂತರಹಿತನು, ಸರ್ವವ್ಯಾಪಿ, ಸರ್ವನಿಯಾಮಕ, ಸರ್ವಸಾಕ್ಷಿ, ಸೃಷ್ಟ್ಯಾದ್ಯಷ್ಟ ಕರ್ತೃ. ಅವನ ಕೃಪೆಯಿಂದ ಜಗದ ಉದ್ಧಾರವಾಗಬೇಕು. ಅವನೇ ಮುಕ್ತಿದಾಯಕ. ಮುಕ್ತಿಗೆ ಭಕ್ತಿಯು ಸಾಧನೆ, ಈ ಸಾಮಾನ್ಯ ವಿಷಯಗಳು ಸಕಲ ಆಸ್ತಿಕ ಮತಗಳಿಗೂ ಸಮ್ಮತ.

ಪ್ರಪಂಚವು ದೇವರದಾದಮೇಲೆ ಪ್ರಪಂಚದಲ್ಲಿರುವವರು ಆ ದೇವರ ನಿಯಮವನ್ನು ಪಾಲಿಸಬೇಕು. ಎಲ್ಲರಿಗೂ ದೇವರು ತಂದೆ ಯಾದಮೇಲೆ ಎಲ್ಲರೂ ಅಣ್ಣತಮ್ಮಂದಿರಂತಿರಬೇಕು. ಎಲ್ಲರ ಹಿತ ಕ್ಕಾಗಿ ಎಲ್ಲರೂ ಕೆಲಸಮಾಡಬೇಕು. ಎಲ್ಲರೂ ಎಲ್ಲವನ್ನೂ ಅನು ಭವಿಸಬೇಕೆಂದರೆ ಸಾಧ್ಯವಲ್ಲ. ಎಲ್ಲರಿಗಾಗಿ ಎಲ್ಲರೂ ಭೋಗದ ಬದಲು ತ್ಯಾಗಮಾಡಬೇಕು. ಶುಚಿರ್ಭೂತರಾಗಿರಬೇಕು. ಭಕ್ತಿ ಯಿಡಬೇಕು. ಸಮಾಜಕಲ್ಯಾಣಕ್ಕಾಗಿ ಒಂದಲ್ಲೊಂದು ತರದ ನಿಯಮಕ್ಕೊಳಗಾಗಬೇಕು. ಇವು ಪ್ರಪಂಚಸಾಮಾನ್ಯದ ನೀತಿಗಳು.

ಮತವೆಂದರೆ— ಬಹುಜನರ ಮತಿಸಮ್ಮತವಾದ ನಿಬಂಧನೆ. ಪ್ರಪಂಚಕ್ಕೆಲ್ಲಾ ಒಂದೇ ಮತವಾಗುವದು ಇದುವರಿಗೆ ಸಾಧ್ಯವಾಗಿಲ್ಲ. ಜನರ ತರಗತಿಗೆ ತಕ್ಕಂತೆ ಮತಗಳಾಗಬೇಕು. ಮೊದಲ ತರಗತಿ ಯವನಿಗೆ ಆಸಕ್ತಿಯನ್ನುಂಟುಮಾಡುವ ಪಾಠಗಳು ಮೇಲ್ತರಗತಿ ಯವನಿಗೆ ಮಾಡಲಾರವು ಅಂದಮಾತ್ರಕ್ಕೆ ಆ ಪಾಠಗಳು ತಪ್ಪಲ್ಲ. ಲೋಕದಲ್ಲಿ ಕಲಹಪ್ರಿಯರಿದ್ದಾರೆ. ಮದ್ಯಪಾಯಿಗಳಿದ್ದಾರೆ. ವಿಷಯ

ಲಂಪಟರಾಗಿದ್ದಾರೆ. ನಾಸ್ತಿಕರಿದ್ದಾರೆ. ಈ ಜನರಿಗೆ ಮಾಡಬೇಕಾದ ಉಪದೇಶ ಬೇರೆ. ಇವರನ್ನು ಸನ್ಮಾರ್ಗಕ್ಕೆ ತರಲು ದೇವರೊಬ್ಬ ನಿದ್ದಾನೆಂದು ನಂಬಿಕೆಯನ್ನು ಹುಟ್ಟಿಸಬೇಕು. ಸಭ್ಯವರ್ತನೆಯನ್ನು ಕಲಿಸಬೇಕು. ಇಲ್ಲಿ ಬಯಸುವ ಭೋಗಗಳು ಸ್ವರ್ಗದಲ್ಲಿ ಶಾಶ್ವತ ವಾಗಿ ಉತ್ತಮವಾಗಿ ದೊರೆಯುವವೆಂದುಪದೇಶಿಸಬೇಕು. ಇಲ್ಲಿ ಸಭ್ಯನಾಗಿ ಬಾಳಿದ ವಿನಾ ಸ್ವರ್ಗಸುಖಗಳು ದೊರಕಲಾರವೆಂದು ಹೇಳಬೇಕು. ಸಮಾಜರಚನೆ ಮಾಡಬೇಕು. ಆದ್ದರಿಂದ ಇಂಥವರ ಸ್ವರ್ಗದಲ್ಲಿ ಭೋಗಸಾಧನೆಯ ವರ್ಣನೆಯನ್ನು ಬುದ್ಧಿವಂತರು ಮಾಡಿ ಕೊಟ್ಟರು. ದುಷ್ಟರನ್ನು ಶಿಷ್ಟರಾಗುವಂತೆ ಮಾಡಿದರು. ಇಷ್ಟೇ ಉಪದೇಶವು ಶಾಂತರೂ ನಿರ್ವ್ಯಸನಿಗಳೂ ಜಿತೇಂದ್ರಿಯರೂ ಆಸ್ತಿ ಕರೂ ಆದ ಜನರಿಗೆ ತೃಪ್ತಿಯನ್ನುಂಟುಮಾಡುವದಿಲ್ಲ. ಇಂಥವರ ಮೋಕ್ಷಕಲ್ಪನೆಯು ಉಚ್ಚತರಗತಿಯದಾಗಬೇಕಾಯಿತು. ಈ ನಿಮಿತ್ತದಿಂದ ಕಾಲಕಾಲಗಳಲ್ಲಿ ಸಮಾಜಪರಿಸ್ಥಿತಿಗನುಸರಿಸಿ ಬೇರೆ ಬೇರೇ ಮತಗಳ ಸ್ಥಾಪನೆಯಾಯಿತು. ಮತಭೇದವಾಯಿತೆಂದು ಮತದ ಹೆಸರಿನಿಂದ ಜನರು ಮತಿಗೆಟ್ಟು ಕಾದುವದು ವಿವೇಕದ ಲಕ್ಷಣವಲ್ಲ. ಮತಗಳಲ್ಲಿ ಪರಸ್ಪರ ಸಹಾನುಭೂತಿಯಿರಬೇಕು. ಇದರ ವಿನಾ ಪ್ರಪಂಚಯಾತ್ರೆಯು ಸಾಗುವದಿಲ್ಲ. ದೇವರನ್ನೇ ನಂಬದ ನಾಸ್ತಿಕ ಮತಗಳು ಪ್ರಪಂಚದಲ್ಲಿವೆ. ಅಂದಮಾತ್ರಕ್ಕೇ ಇವು ಪ್ರಪಂಚದ ನೀತಿಯನ್ನು ಮೀರಿ ಸುಖವಾಗಿ ಬಾಳಲು ಸಾಧ್ಯವಿಲ್ಲ.

ಆಸ್ತಿಕ ಮತಗಳಲ್ಲಿ ಭಾರತೀಯ ದೃಷ್ಟಿಯಿಂದ ನೋಡಿದರೆ ವೈದಿಕ ಅವೈದಿಕಗಳೆಂಬ ಎರಡು ಪಂಗಡಗಳಿವೆ. ಇಸಾಯಿ ಇಸ್ಲಾಂ ಜೈನ ಪಾರಸಿಕ ಮೊದಲಾದವು ಅವೈದಿಕ ಮತಗಳು. ಶಂಕರ ರಾಮಾನುಜ ಮಧ್ವ ವಲ್ಲಭ ಚೈತನ್ಯ ಇವು ವೈದಿಕ ಮತಗಳು ವೈದಿಕ ಮತಗಳು ಶ್ರುತಿ ಸ್ಮೃತಿ ಪುರಾಣಗಳನ್ನು ಪ್ರಮಾಣವೆಂದು

ನಂಬುವವು. ಪ್ರಮಾಣನಿರ್ಣಯದಲ್ಲಿ ಪುರಾಣಗಳಿಗಿಂತ ಸ್ಮೃತಿಗಳಿಗೂ ಸ್ಮೃತಿಪುರಾಣಗಳಿಗಿಂತ ಶ್ರುತಿಗೂ ಆಧಿಕ್ಯವಿರುವದು. ಸ್ಮೃತಿಪುರಾಣಗಳಲ್ಲಿ ಏಕವಾಕ್ಯತೆಯಿಲ್ಲವೆಂದು ಶ್ರುತಿಯನ್ನೇ ಪ್ರಮಾಣವಾಗಿಟ್ಟುಕೊಂಡು ದಯಾನಂದರ ಆರ್ಯಸಮಾಜವು ಸ್ಥಾಪಿತವಾಗಿರುವದು ಅವರೂ ಸ್ಮೃತಿಪುರಾಣಗಳ ನೀತಿಯನ್ನು ಸಮಾಜಗಳು ತಿರಸ್ಕರಿಸುವದಿಲ್ಲ. ಇವರ ಜೊತೆಗೆ ಶೈವ ವೈಷ್ಣವಗಳೆಂಬ ದೊಡ್ಡ ವಿಭಾಗವಾಡುವ ತಾಂತ್ರಿಕ ಮತಗಳಿವೆ. ತತ್ವದೃಷ್ಟಿಯಿಂದ ಈ ಭೇದಗಳು ವಿಶೇಷ ಭೇದಗಳೆನಿಸುವದಿಲ್ಲ

ಪ್ರಪಂಚದಲ್ಲಿ ಇದುವರೆಗೆ ಎಷ್ಟೋ ಮತಗಳು ಹುಟ್ಟಿದವು. ಮುಂದೆ ಎಷ್ಟೋ ಮತಗಳು ಹುಟ್ಟಬಹುದು. ಅವು ವೈದಿಕಗಳಾದರೂ ಆಗಬಹುದು. ಅವೈದಿಕಗಳಾದರೂ ಆಗಬಹುದು. ಎಲ್ಲವೂ ದ್ವೈತ ವಿಶಿಷ್ಟಾದ್ವೈತ ಅದ್ವೈತಗಳೆಂಬ ಮೂರು ದೊಡ್ಡ ಪಂಗಡಗಳಲ್ಲಿ ಅಡಕವಾಗುವವು. ಈ ಎಲ್ಲಾ ಮತ ಭೇದ, ಆಚಾರ ವಿಚಾರ ಭೇದ, ಆಹಾರ ವಿಹಾರ ಭೇದ, ದೇಶ ಭೇದ ಭಾಷಾಭೇದಗಳಲ್ಲಿ ಅಭೇದವನ್ನು ಕಂಡುಹಿಡಿದು ಶಾಂತಿಯಿಂದ ಬದುಕಬೇಕಾದ ಭಾಗ್ಯವು ಭರತಖಂಡಕ್ಕೊದಗಿರುವದು. ಇತರ ದೇಶಗಳಲ್ಲಿ ಈ ಪರಿಸ್ಥಿತಿಯಿಲ್ಲ. ರಾಷ್ಟ್ರಮತವೆಂದಕೂಡಲೇ(State Religion) ಯಾರಾದರೂ ತಲೆಬಾಗಬೇಕಾಗುವದು. ಪ್ರಸಕ್ತ ಕನ್ಯಕಾಪುರಾಣವನ್ನು ಬರೆಯುವಾಗ ಮತಗಳ ಪೂರ್ವಚರಿತ್ರೆಯನ್ನು ಬರೆವದೆ ಅಪ್ರಾಸಂಗಿಕವಾಗುವದಿಲ್ಲ. ಇದೊಂದು ಕಥೆಯ ಪೂರ್ವಪೀಠಿಕೆಯಾಗುವದು. ಆದ್ದರಿಂದಲೇ ಬರೆದಿರುವದು.

ಕನ್ಯಕಾಪರಮೇಶ್ವರಿಯೆಂದರೆ ಇತರ ಮತಾಚಾರ್ಯರುಗಳಂತೆ ತನ್ನದೇ ಪ್ರತ್ಯೇಕ ಮತವನ್ನು ಸ್ಥಾಪಿಸಲು ಹೊರಟವಳಲ್ಲ. ವೈಶ್ಯರ ಮತವೆಂದರೆ ವೇದಮತ; ಅರ್ಥಾತ್ ಬ್ರಾಹ್ಮಣ ಮತ. ದ್ವೈತ

ವಿಶಿಷ್ಟಾದ್ವೈತ ಅದ್ವೈತ ಮತಗಳನ್ನು ವೈಶ್ಯರು ಅನುಸರಿಸಿರುವರು. ಅದ್ವೈತಮತಕ್ಕೊಪ್ಪಿ ಸ್ಮಾರ್ತರನ್ನು ಗುರುಗಳನ್ನಾಗಿ ಮಾಡಿಕೊಂಡಿರುವ ವೈಶ್ಯರು ಹೇರಳವಾಗಿರುವರು. ವಿಶಿಷ್ಟಾದ್ವೈತ ಸಂಪ್ರದಾಯವನ್ನನುಸರಿಸಿ ಶ್ರೀವೈಷ್ಣವರನ್ನು ಗುರುಗಳೆಂದು ನಂಬಿರುವ ವೈಶ್ಯರು ಅನೇಕರಿರುವರು. ದ್ವೈತಮತಕ್ಕೊಪ್ಪಿ ಮಾಧ್ವರಂತೆ ಚಕ್ರಾಂಕನ ಮಾಡಿಕೊಂಡು ಮಾಧ್ವರ ನಿಯಮಾನುಷ್ಠಾನಪರರಾದ ವೈಶ್ಯರೂ ಕೆಲವರಿರುವರು. ಇವರ ಸಂಪ್ರದಾಯ ಭೇದಗಳು ಜಾತಿಭೇದವಾಗಿ ಪರಿಣಮಿಸದಿರುವದು ಸ್ತೋತ್ರಾರ್ಹವೇ ಸರಿ.

ವಾಣಿಜ್ಯವೇ ವೈಶ್ಯರು ಕೈಕೊಂಡ ವೃತ್ತಿಯಾದುದರಿಂದ ದೇಶದ ಸಂಪದಭಿವೃದ್ಧಿಕಾರ್ಯದಲ್ಲಿವರು ನಿರತರಾದರು. ಇವರು ತತ್ವವಿಮರ್ಶಾಕಾರ್ಯವನ್ನು ಬ್ರಾಹ್ಮಣರಿಗೆ ಬಿಟ್ಟು ಅವರ ಅನುಯಾಯಿಗಳಾದರು. ಕನ್ಯಕಾಪರಮೇಶ್ವರಿಯ ಧರ್ಮವೇನಿದ್ದರೂ ಭಕ್ತಿಯಿಂದ ಉದ್ಬೋಧಿತವಾದ ಭಾಗವತಧರ್ಮ; ತ್ಯಾಗ; ಆತ್ಮನಿವೇದನ; ಪವಿತ್ರಜೀವನ.

ಶಾಸ್ತ್ರದೃಷ್ಟಿಯಿಂದ ನೋಡಿದರೆ ಬ್ರಾಹ್ಮಣ ಕ್ಷತ್ರಿಯರಂತೆ ವೈಶ್ಯರೂ ದ್ವಿಜರು; ವೇದಾಧಿಕಾರಿಗಳು. ಬ್ರಾಹ್ಮಣರೆಂದರೆ ಯಜನ ಯಾಜನ, ಅಧ್ಯಯನ ಅಧ್ಯಾಪನ, ದಾನಪ್ರತಿಗ್ರಹಗಳೆಂಬ ಷಟ್ಕರ್ಮ ನಿರತರು. ಕ್ಷತ್ರಿಯರೂ ವೈಶ್ಯರೂ ಯಜನ ಅಧ್ಯಯನ ದಾನಗಳೆಂಬ ತ್ರಿಕರ್ಮನಿರತರು. ಯಾಜನ ಅಧ್ಯಾಪನ ಪ್ರತಿಗ್ರಹಗಳೆಂಬ ಮೂರು ವೃತ್ತಿಗಳು ಬ್ರಾಹ್ಮಣರ ಜೀವಿಕೆಗಾಗಿ ಕ್ಷತ್ರಿಯರೂ ವೈಶ್ಯರೂ ಬಿಟ್ಟು ಕೊಟ್ಟ ಮಾನ್ಯವಾಗಿರುವವು.

ಈಚೆಗೆ ಯಾವ ಕಾರಣದಿಂದಲೋ ಯಾವ ಕಾಲದಲ್ಲೋ ವೈಶ್ಯರಲ್ಲಿ ವೇದೋಕ್ತಕರ್ಮಗಳು ತಪ್ಪಿಹೋಗಿವೆ. ಬದಲಾಗಿ

ಪುರಾಣೋಕ್ತ ಕರ್ಮಗಳ ರೂಢಿ ಬಂದಿದೆ. ಇದರ ಕಾರಣವೇನು— ಕಾರಣರಾರು—ಎಂಬುದನ್ನು ನಿರ್ಧರಿಸುವದು ಸಾಧ್ಯವಲ್ಲ. ಕನ್ನಿಕೆಯ ಕಾಲದಲ್ಲಿ ವೈಶ್ಯರು ವೇದೋಕ್ತಕರ್ಮಾನುಷ್ಠಾನುಪರರಾಗಿದ್ದರೆಂದು ಪುರಾಣವು ಸಾರುತ್ತಿದೆ. ಸದಾ ಯುದ್ಧನಿರತರಾಗಿರಬೇಕಾಗಿದ್ದುದರಿಂದ ಕ್ಷತ್ರಿಯರಿಗೂ, ವಣಿಗ್ವೃತ್ತಿಯಲ್ಲಿದ್ದು ದೇಶಪರ್ಯಟನ ಮಾಡಬೇಕಾಗಿದ್ದುದರಿಂದ ವೈಶ್ಯರಿಗೂ, ಸೌಲಭ್ಯಕ್ಕಾಗಿ ಪುರಾಣೋಕ್ತಕರ್ಮಗಳ ರೂಢಿ ಬಂದಿರಬಹುದೆಂದು ಯೋಚಿಸಲು ಅವಕಾಶವಿದೆ. ಕ್ಷತ್ರಿಯರು ಯುದ್ಧದಿಂದಲೇ ಜೀವಿಸುವದಾಗಲಿ ವೈಶ್ಯರು ವಾಣಿಜ್ಯದಿಂದಲೇ ಜೀವಿಸುವದಾಗಲಿ ಈ ಕಾಲದಲ್ಲಿ ಅನಾಗರಿಕ ಭಾವನೆಗಳಾಗಿ ಕಂಡುಬರುತ್ತಿವೆ. ಭಾರತೀಯನ ಪರಿಮಿತಪ್ರಪಂಚವು ಬಲುವಿಸ್ತಾರವಾಗಿ ಬಿಟ್ಟಿದೆ. ಯಂತ್ರಸಾಧನೆಗಳಿಂದ ಬಲುದೂರದಲ್ಲಿದ್ದದ್ದು ಕೈಚಾಚಿದರೆ ಸಿಗುವಂತಾಗಿದೆ. ಯುದ್ಧಗಳ ಅವಶ್ಯಕತೆಯಿಲ್ಲದೆ ಸಾಮದಾನೋಪಾಯಗಳಿಂದ ಜಗತ್ತನ್ನು ನಿರ್ವಹಿಸಬಹುದಾದ ಕಾಲವು ಈ ಗಾಂಧೀಯುಗದಲ್ಲಿ ಸಮೀಪಿಸುತ್ತಲಿದೆ. ಈ ನಿಮಿತ್ತದಿಂದ ಜನರ ವೃತ್ತಿ ವಿನಿಮಯವಾಗಬೇಕಾಗಿದೆ. ವೈಶ್ಯರ ವ್ಯಾಪಾರವು ಮೊದಲಿನಂತೆ ದೇಶಪರ್ಯಟನದಿಂದಲೇ ನಡೆಯಬೇಕಾಗಿಲ್ಲ. ಪ್ರಯಾಣಸೌಕರ್ಯಗಳು ಹೆಚ್ಚಿವೆ. ಒಂದೇದಿನವಲ್ಲಿ ಪ್ರಪಂಚದ ಯಾವ ಭಾಗಕ್ಕಾದರೂ ವರ್ತಮಾನಕೊಟ್ಟು ಉತ್ತರವನ್ನು ತರಿಸಿಕೊಳ್ಳುವಹಾಗಿದೆ. ಈ ಸೌಲಭ್ಯದಿಂದ ಇತರ ವರ್ಣಗಳವರಿಗೆ ವಿಶೇಷಸಮಯ ದೊರೆತು ಧರ್ಮಜಿಜ್ಞಾಸಮಾಡಲು ಅನುಕೂಲವಾಗುತ್ತಿದೆ. ಆದ್ದರಿಂದ ತಮ್ಮ ಧರ್ಮದಕಡೆಗೆ ವೈಶ್ಯರು ಈಗೀಗ ಹೆಚ್ಚು ಲಕ್ಷ್ಯಕೊಡುತ್ತಿದ್ದಾರೆ. ತಮ್ಮ ವೃತ್ತಿಯನ್ನೂ ಪಾಲಿಸಿಕೊಂಡು, ವೇದೋಕ್ತ ಕರ್ಮಾನುಷ್ಠಾನಪರರೂ ಆಗಿ, ಯಜ್ಞಾದಿಗಳನ್ನುಮಾಡಿ ಸೋಮಯಾಜಿಗಳೆಂಬ ಹೆಸರುಪಡೆದ ವೈಶ್ಯರು ಕೆಲವರಾಗಿದ್ದಾರೆ. ವೈಶ್ಯರು ವೇದೋಕ್ತಕರ್ಮಾನುಷ್ಠಾನ ಮಾಡಿದುದ

ರಿಂದ ಸಮಾಜದಲ್ಲಾಗಬೇಕಾದ ಘರ್ಷಣೆಗಳಾಗಿವೆ. ಈ ಘರ್ಷಣೆ ಗಳು ತತ್ಕಾಲದಲ್ಲಿ ಬರಬಹುದಾದ ಕ್ರಮದಂತೆ ಬಂದಿರುವದರಿಂದ ಇದರ ಕಡೆಗೆ ಜನರ ಲಕ್ಷ್ಯವು ಹೆಚ್ಚಾಗಿ ಬಿದ್ದಿಲ್ಲ.

ಈ ಕಾಲದಲ್ಲಿ ಯಾವ ವರ್ಣದವರಿಗೂ ವರ್ಣೋಚಿತ ಕರ್ಮ ಗಳನ್ನಾಚರಿಸಲು ಸಾಧ್ಯವಿಲ್ಲವೆಂದು ಕೆಲವರಾಡುತ್ತಾರೆ. ಜೀವನ ಸಂಗ್ರಾಮವೇ ದೊಡ್ಡದಾಗಿದೆಯೆಂದು ಹೇಳುವರು ಕೆಲವರಾಗಿ ದ್ದಾರೆ. ವಿಚಾರಮಾಡಿದರೆ ಈ ಎರಡೂ ಭಾವನೆಗಳಿಗೆ ಸರಿಯಾದ ಅರ್ಥವಿರುವದಿಲ್ಲ. ಎಲ್ಲ ಬಗೆಯ ಹೇಡಿತನದ ಭಾವನೆಗಳುಂಟಾಗಲು ಕಾರಣವಾಗಿರುವದು ಸಾವಿರಾರು ವರ್ಷಗಳಿಂದ ಪ್ರಾಪ್ತವಾಗಿರುವ ಪಾರತಂತ್ರ್ಯ. ಜನತೆಯಲ್ಲಿ ಧರ್ಮಾಭಿಮಾನ ಹುಟ್ಟಿತೆಂದರೆ ದಾಸ್ಯ ಶೃಂಖಲೆಯು ತಾನಾಗಿ ಕಳಚಿಹೋಗುವದು. ನಮ್ಮ ಸಂಸ್ಕೃತಿಯಾ ದರೋ—ಪ್ರಪಂಚದ ಎಲ್ಲ ಸಂಸ್ಕೃತಿಗಳಿಗಿಂತ ಪುರಾತನವಾದುದು ಸಾವಿರಾರು ವರ್ಷಗಳ ದುಃಖದ ಒರೆಗಲ್ಲಿಗೆ ತಿಕ್ಕಿ ಮುಕ್ಕಿದ್ದರೂ ಸಂಸ್ಕೃತಿಯು ನಾಶವಾಗದಿರುವದು ಕೇವಲ ಸಂಸ್ಕೃತಿಯ ಪ್ರಭಾವ ವಾಗಿರುವದು. ಬಲು ಕಾಲದ ಜನರ ಆಚರಣೆಯಲ್ಲಿ ಯಾವ ಕಾರಣ ದಿಂದಲೋ ನಮ್ಮಲ್ಲಿ ತಪ್ಪು ಭಾವನೆಗಳು ಬಂದಿರಬಹುದು. ಆ ತಪ್ಪು ನಡವಳಿಕೆಯೇ ನಮ್ಮ ಧರ್ಮವೆಂದು ಅಜ್ಞಾನ ಕವಿದಿರಬ ಹುದು. ಆ ತಪ್ಪು ಅಥವಾ ಅಜ್ಞಾನಗಳನ್ನು ಸಂಸ್ಕೃತಿಯ ಪದರಿಗೆ ಹಾಕುವದು ಸರ್ವಥಾ ಯೋಗ್ಯವಲ್ಲ

ನಮ್ಮ ದೇಶಕ್ಕೆ ವಿಧರ್ಮಿಗಳು ಪದಾರ್ಪಣ ಮಾಡುವದಕ್ಕೆ ಮುಂಚೆ ನಮ್ಮ ಆಚರಣೆಗಳು ಹೇಗಿದ್ದರೂ ಬಾಧಕವಾಗುತ್ತಿರಲಿಲ್ಲ. ಯಾರು ಯಾರನ್ನು ಎಷ್ಟು ತಿರಸ್ಕರಿಸಿ ಬಹಿಷ್ಕರಿಸಿದರೂ ಬಾಧಕವಾ ಗುತ್ತಿರಲಿಲ್ಲ. ಏಕೆಂದರೆ — ಗತ್ಯಂತರವಿಲ್ಲದ ಆ ಜನರಿಗೆ ನಮ್ಮ ಧರ್ಮದ ವಿನಾ ಅನ್ಯಧರ್ಮಗಳನ್ನಾಶ್ರಯಿಸಬಹುದಾದ ದುರಾಶೆ

ದುರ್ಬೋಧನೆಗಳಿರಲಿಲ್ಲ ಈ ಕಾಲವಾದರೋ ಹಾಗಿಲ್ಲ. ಹೇಗಾದರೂ ಸನಾತನ ಧರ್ಮದಲ್ಲಿ ಜನರಿಗೆ ಜಿಗುಪ್ಸೆಯನ್ನುಂಟು ಮಾಡಲು ವಿಧರ್ಮಿಗಳು ಕಾದಿದ್ದಾರೆ. ಅವರು ನಮ್ಮವರನ್ನು ತಮ್ಮ ಧರ್ಮಕ್ಕೆ ಸೇರಿಸಿಕೊಂಡು ಸಂಖ್ಯಾಪ್ರಮಾಣ ಬೆಳೆಸಲು ಸಿದ್ಧರಾಗಿದ್ದಾರೆ. ಪರಕೀಯ ಧರ್ಮಗಳ ಕತ್ತರಿಯಲ್ಲಿ ಸಿಕ್ಕಿ ನರಳುವದು ನಮ್ಮ ಸಮಾಜದ ಗತಿಯಾಗಿದೆ. ನಮ್ಮ ಧರ್ಮಗ್ರಂಥಗಳೇನೆನ್ನುವವೆಂದು ತಿಳಿಯುವ ಅವಕಾಶ ಜನರಿಗಿಲ್ಲ. ಕೆಲವರಿಗೆ ಆ ಶಬ್ದೋಚ್ಚಾರಣೆಗೆ ಅಧಿಕಾರವಿಲ್ಲ. ಧರ್ಮಪೀಠಗಳವರು ಆದಷ್ಟು ಬಹಿಷ್ಕಾರದಿಂದ ತಮ್ಮ ಅಧಿಕಾರ ದರ್ಪವನ್ನು ತೋರಿಸುತ್ತಿದ್ದಾರೆ ಹೀಗಿರುವದೇ ತಮ್ಮ ಶ್ರೇಷ್ಠತೆಯೆಂದು ತಿಳಿಯುತ್ತಾರೆ. ಯಾವ ಸಮಾಜದಲ್ಲಿ ಪತಿತರನ್ನು ಪಾವನಗೊಳಿಸುವ ಉದಾರಭಾವನೆಯಿಲ್ಲವೋ ಆ ಸಮಾಜವೆಂದಿಗೂ ಜೀವಿಸುವದಿಲ್ಲ. ಮಧ್ಯಕಾಲದಲ್ಲಿ ತಪ್ಪಿಹೋದ ಶಾಸ್ತ್ರಸಿದ್ಧವಾದ ವೇದಾಧಿಕಾರವನ್ನು ಪುನಃ ಸಂಪಾದಿಸುವದು ವೈಶ್ಯರಿಗೆ ಸ್ವರಾಜ್ಯ ಸಂಪಾದನೆಗಿಂತ ಅಧಿಕವಾಗಿದೆ. ಸಾಲದುದಕ್ಕೆ ಕಲಿಯುಗದಲ್ಲಿ ಜಾತಿ ಕ್ಷತ್ರಿಯ ಜಾತಿ ವೈಶ್ಯವರ್ಣಗಳಿಲ್ಲವೆಂಬ ನಿರಾಧಾರವಾದ ಮಾತು ಚಲಾವಣೆಗೆ ಬಂದಿದೆ. ಈ ಪರಿಸ್ಥಿತಿಯಲ್ಲಿ ವೇದದ ಒಡೆತನವು ಬ್ರಾಹ್ಮಣರಿಗೆ ಮಾತ್ರ ಇದ್ದಂತಾಗಿದೆ. ಬ್ರಾಹ್ಮಣರಲ್ಲೂ ಹತ್ತುಸಾವಿರಕ್ಕೊಬ್ಬ ವೇದವೇತ್ತನು ಸಿಗುವಂತಿಲ್ಲ. ಇದ್ದವರಿಗೆ ಜೀವನವಿಲ್ಲ. ಇಪ್ಪತ್ತೈದುಕೋಟಿ ಹಿಂದುಗಳಲ್ಲಿ ಇಪ್ಪತ್ತೈದುಸಾವಿರ ವೇದವೇತ್ತರಿರುವದಾದರೂ ಸಂಶಯಾಸ್ಪದವಾಗಿದೆ. ಇಷ್ಟೊಂದು ಧರ್ಮಮಾಲಿನ್ಯವಾದರೂ ಧರ್ಮದ ಗುತ್ತಿಗೆದಾರರೆನಿಸಿರುವ ಮಠಾಧಿಪತಿಗಳ ಮನಸ್ಸಿಗೆ ಪರಿತಾಪ ಹುಟ್ಟಿಲ್ಲ. ಅವರಿಗೆ ಅವರ ಜವಾಬ್ದಾರಿಯೇನೆಂಬುದು ತಿಳಿದಿಲ್ಲ. ಮಾತೆತ್ತಿದರೆ— ಇದು ಕಲಿಗಾಲ; ದೇವರ ಸಂಕಲ್ಪ ಹೀಗಿದೆ; ಜನರೆಲ್ಲರೂ ಕೆಟ್ಟುಹೋಗಬೇಕು; ಮ್ಲೇಂಛಮಯವಾಗಬೇಕು; ನಾವೇನೂ ಮಾಡುವದಕ್ಕೆ ಬರುವದಿಲ್ಲ; ಧರ್ಮೋದ್ಧಾರಕ್ಕೆ

ದೇವರೇ ಅವತರಿಸಬೇಕು; ಆವನ ಧರ್ಮವನ್ನು ಅವನೇ ಕಾದುಕೊಳ್ಳಬೇಕು; ಇಂಥಾ ಬಾಷ್ಕಳ ವಚನಗಳ ಸುರಿಮಳೆ ಮಾಡುತ್ತಾರೆ. ಮಾಡುವದೇನು ? ಕೇಳುವದ್ಯಾರನ್ನು ?

ಈ ಅಭಿಪ್ರಾಯವೇ ಸತ್ಯವಾಗಿದ್ದರೆ, ದೇವರನ್ನು ದೋಷಿಯೆನ್ನುವ ಪಾಪಕ್ಕೊಳಗಾಗಬೇಕಾಗುವದು. ಮ್ಲೇಂಛಮಯವಾಗಬೇಕಾದ ಈ ಕಲಿಯುಗದಲ್ಲೇ ಧರ್ಮೋದ್ಧಾರಕ್ಕೆಂದು ಶಂಕರಾವತಾರವೇಕಾಯಿತು ? ರಾಮಾನುಜಾಚಾರ್ಯರಂಥಾ ದಯಾಳುಗಳು ಆ ಚಂಡಾಲರಿಗೂ ಅಷ್ಟಾಕ್ಷರಿಮಂತ್ರೋಪದೇಶಿಸಿದರು ? ಮಧ್ವಾಚಾರ್ಯರು ಮೂರು ಮೂರು ವೇಳೆ ಭರತಖಂಡವನ್ನು ಸಂಚರಿಸಿ ಮ್ಲೇಂಛರಾಜನನ್ನು ಪಾದಾಕ್ರಾಂತನನ್ನಾಗಿ ಮಾಡಿಕೊಂಡು ಭಕ್ತಿ ಮಾರ್ಗವನ್ನೇಕೆ ಉಪದೇಶಿಸಿದರು? ಸಂಸ್ಕೃತ ವಾಙ್ಮಯದಲ್ಲಿದ್ದ ವೇದಾದಿ ಗ್ರಂಥಗಳನ್ನು ಕನ್ನಡಿಸಿ ಹರಿದಾಸರುಗಳೇಕೆ ಉಪದೇಶಿಸಿದರು ? ಇವೆಲ್ಲವನ್ನೂ ವಿಚಾರಿಸಬೇಕಾಗುವದು.

ನಿಜವಾಗಿಯೂ ಯಾರಿಗಾದರೂ ಸನಾತನ ಧರ್ಮವನ್ನು ಜ್ಜೀವನಗೊಳಿಸಬೇಕೆಂದಿದ್ದರೆ,—ಸನಾತನ ಧರ್ಮಧ್ವಜವನ್ನು ಭರತಖಂಡದಲ್ಲಿ ಮಾತ್ರವಲ್ಲ, ಮಾನವ ಪ್ರಪಂಚದಲ್ಲೆಲ್ಲಾ ಮೆರೆಸಬೇಕೆಂಬ ಧರ್ಮಾಭಿಮಾನವಿದ್ದರೆ - ಅಂಥವರು ಪರಾವಲಂಬನೆಯನ್ನು ಬಿಟ್ಟು ಸ್ವಾವಲಂಬಿಗಳಾಗಬೇಕು ಮಠಪತಿಗಳಿಂದ ಧರ್ಮವೂ ರಾಜರಿಂದ ರಾಜ್ಯವೂ ಉದ್ಧಾರವಾಗಲೆಂದು ಕಾದು ಕೂಡುವ ಕಾಲವು ಹಿಂದಾಯಿತು. ಪ್ರಜೆಗಳೇ ಮುಂದಾಗಿ ಸ್ವರಾಜ್ಯಸಂಪಾದನೆ ಮಾಡುವಂತೆ ಧರ್ಮರಾಜ್ಯವನ್ನು ಸಂಪಾದಿಸಬೇಕು. ನಾಳೆ ಸ್ವರಾಜ್ಯ ಬಂದರೂ ಅದು ಸುರಾಜ್ಯವಾಗಬೇಕಾದರೆ ಅದನ್ನು ಮೊದಲು ಧರ್ಮದ ತಳಗಲ್ಲಿನಮೇಲೆ ಸ್ಥಾಪಿಸಬೇಕು. ಕರ್ಮಮಾತ್ರದಿಂದ ನಾಮಾವಶೇಷವಾಗಿರುವ ಚಾತುರ್ವರ್ಣ್ಯವನ್ನು ಗುಣಕರ್ಮಗಳೆರೆಡೆ

ರಿಂದಲೂ ರೂಢಮೂಲವಾಗುವಂತೆ ಪ್ರತಿಷ್ಠಿಸಬೇಕು. ಯಾರ ಹಕ್ಕು ಬಾಧ್ಯತೆಗಳಿಗೆ ಯಾರೂ ಬಾಧಕರಾಗಬಾರದು.

ಹೆಚ್ಚು ಬೇಡ — ಈಗ ಕ್ಷತ್ರಿಯರೆಂದು ಹೇಳಿಕೊಳ್ಳುತ್ತಾ, ಕಾಲಪುರುಷನ ಬಾಯಿಗೆ ತುತ್ತಾಗಿ ಹೀನ ದೀನ ಸ್ಥಿತಿಗೆ ಬಂದಿರುವ ರೆಲ್ಲರನ್ನೂ ಒಟ್ಟುಗೂಡಿಸಿ, ಕ್ಷತ್ರಿಯೋಚಿತ ಸಂಸ್ಕಾರಗಳಿಂದವರನ್ನು ಶುದ್ಧಿಗೊಳಿಸಿ, ಆ ಒಂದು ಸಮಾಜವನ್ನೇ ರೂಪಕ್ಕೆ ತಂದರೆ ಭರತ ಖಂಡದ ಕ್ಷಾತ್ರತೇಜವು ಎಷ್ಟು ಉಜ್ವಲವಾಗುವದು ? ಇದರಂತೆ ಇನ್ನೂ ಎಷ್ಟೋ ಉಪ ಪಂಗಡಗಳನ್ನು ಸುಸಂಸ್ಕೃತರನ್ನಾಗಿ ಮಾಡಲು ಅವಕಾಶವಿದೆ.

ನಮ್ಮ ವೇದಶಾಸ್ತ್ರಗಳ ಮಹತ್ವವನ್ನು ವಿದೇಶೀಯರೂ ವಿಧರ್ಮಿಗಳೂ ತಿಳಿಯಲಾರಂಭಿಸಿದರು. ಮ್ಯಾಕ್ಸ್‌ಮುಲ್ಲರ್ ಪಂಡಿತನು ತನ್ನ ಜೀವಿತಕಾಲವನ್ನು ವೇದವ್ಯಾಸಂಗದಲ್ಲಿ ಕಳೆದು ಅವುಗಳನ್ನು ತನ್ನ ಭಾಷೆಗೆ ತರ್ಜುಮೆಮಾಡಿದನು. ಜರ್ಮನಿಯ ಯಾತ್ರಿಕರನೇಕರು ನಮ್ಮ ದೇಶದ ಎಷ್ಟೋ ಗ್ರಂಥ ಭಂಡಾರಗಳನ್ನು ತಮ್ಮ ದೇಶ ಕ್ಕೊಯ್ದರು. ನಮ್ಮ ದೇಶದಲ್ಲಿ ದೊರೆಯುವ ಖಿಲ ವೇದಭಾಗಗಳನ್ನು ಅವರು ಪ್ರಚುರಿಸುವ ಕಾಲ ಬಂದಿತು. ನಮ್ಮ ಧರ್ಮಕ್ಕೇ ಸಂಬಂಧ ಪಡದ ಸ್ವೇಚ್ಛಾಹಾರ ಸ್ವೇಚ್ಛಾಪಾನ ಸ್ವೇಚ್ಛಾವಿಹಾರರತರಾದವ ರಿಂದ ನಮ್ಮ ಧರ್ಮದ ಮಹತ್ವವನ್ನು ತಿಳಿಯುವ ಕಾಲ ಬಂತು. ಇಷ್ಟಾದರೂ ನಮ್ಮ ದೇಶೀಯರೂ ನಮ್ಮ ಧರ್ಮದವರೂ ಆದ ಜನ ರಿಗೆ ನಮ್ಮ ಧರ್ಮದ ಜ್ಞಾನವನ್ನು ಸಂಪಾದಿಸಿಕೊಳ್ಳುವ ಕಾಲ ಬರ ಲಿಲ್ಲ. ಯಾವನು ಯಾವ ಧರ್ಮದವನೋ ಅವನಿಗೆ ಆ ಧರ್ಮಗ್ರಂಥ ಗಳನ್ನೋದುವ ಅಧಿಕಾರವಿಲ್ಲದಿದ್ದರೆ ಅಂಥವನಿಗೆ ಆ ಧರ್ಮವಲ್ಲಿ ವಿಶ್ವಾಸವಿರುವದು ಸಾಧ್ಯವಲ್ಲ. ಮುಸಲ್ಮಾನನೆನಿಸಿದವನಿಗೆ ಕೊರಾ

ನಿನ ಅಧಿಕಾರವಿದೆ. ಕ್ರೈಸ್ತನೆನಿಸಿದವನಿಗೆ ಬೈಬಲ್ಲಿನ ಅಧಿಕಾರವಿದೆ. ಹಿಂದುವಾದವನಿಗೂ ಇಂಥಾ ಅಧಿಕಾರವಿರಬೇಕು.

ಸದ್ಯಸ್ಥಿತಿಯಲ್ಲಿ ಪ್ರತಿ ಹಿಂದುವಿಗೂ ತಾನು ಯಾರು? ಸನಾತನ ಧರ್ಮವೆಂದರೇನು? ಅನ್ಯ ಧರ್ಮಗಳೊಡನೆ ತೂಗಿದರೆ ಸನಾತನ ಧರ್ಮವು ಎಷ್ಟು ಮಹತ್ವವುಳ್ಳದ್ದು? ವಿಧರ್ಮಿಗಳ ಉಪಟಳಕ್ಕೆ ಸಿಗದಂತೆ ತಾನೂ ತನ್ನ ಕುಟುಂಬದವರೂ ಧರ್ಮರಕ್ಷಣೆಮಾಡಿಕೊಳ್ಳುವ ಬಗೆ ಹೇಗೆ?' ಇಷ್ಟು ಮಾತ್ರವಾದರೂ ಜ್ಞಾನವನ್ನುಂಟುಮಾಡುವ ವ್ಯವಸ್ಥೆಯಾಗಬೇಕು. ಹಿಂದೂ ಸಾಮಾನ್ಯರಿಗೆಲ್ಲಾ ಒಂದು ಸಾರ್ವಜನಿಕ ಪ್ರಾರ್ಥನಾಪದ್ಧತಿಯು ರೂಢಿಗೆ ಬರಬೇಕು.

ನಮ್ಮಲ್ಲಿ ಮನುಷ್ಯನನ್ನು ನೋಡಿದಕೂಡಲೇ ಜಾತಿಯ ತಕ್ಕಡಿಯಲ್ಲಿಟ್ಟು ತೂಗುವ ದುರಭ್ಯಾಸವಿದೆ. ಇದು ಸಕಲ ಅನರ್ಥಗಳಿಗೂ ಕಾರಣವಾಗಿದೆ. ಈ ಕಾಲದಲ್ಲಿ ಮೇಲ್ತರಗತಿಯವರ ಮನಸ್ಸು ವಿಶಾಲವಾಗಬೇಕು. ಅಜ್ಞನನ್ನೂ ಪ್ರಾಜ್ಞನನ್ನಾಗಿ ಮಾಡುವ ಔದಾರ್ಯಹುಟ್ಟಬೇಕು. ದುರಾಚಾರಿಯನ್ನು ಸದಾಚಾರಿಯನ್ನಾಗಿ ಮಾಡುವ ಸಹನಶೀಲತೆ ಬರಬೇಕು. ಇಂಥಾ ಅವಕಾಶ ದೊರೆತದ್ದರಿಂದ ದಾಸೀಪುತ್ರನಾದ ವಿದುರನು ವೇದಾಂತಿಯಾದನು. ಬೇಡರ ವಾಲ್ಮೀಕನು ಮಹಾಮುನಿಯೆನಿಸಿದನು. ಮೀನು ಹಿಡಿಯುವ ಅಂಬಿಗನು ಶೌನಕಾದಿ ಮಹರ್ಷಿಗಳಿಗುಪದೇಶಕೊಡುವ ಸೂತಾಚಾರ್ಯನಾದನು. ವಿಶಾಲಬುದ್ಧಿಯು ಜನತೆಯಲ್ಲಿ ಕಡಮೆಯಾದಹಾಗೆ ಜಾತಿದ್ವೇಷಗಳು ಹೆಚ್ಚಿದವು. ಬ್ರಾಹ್ಮಣ ಬ್ರಾಹ್ಮಣೇತರವೆಂಬ ವಿಭಾಗವಾಯಿತು. ಬ್ರಾಹ್ಮಣರನ್ನು ಅವಲಂಬಿಸಿದ್ದ ಜನರು ಅವರನ್ನು ದ್ವೇಷಿಸಲಾರಂಭಿಸಿದರು. "ವರ್ಣಾನಾಂ ಬ್ರಾಹ್ಮಣೋಗುರುಃ" ಎಂಬ ಮಾತು ಹಾಸ್ಯಾಸ್ಪದವಾಯಿತು.

ಪ್ರಕೃತ ವೈಶ್ಯಸಮಾಜವಾದರೋ—ಇನ್ನೂ ಬ್ರಾಹ್ಮಣರನ್ನು ಪೂರ್ತಿಯಾಗಿ ಬಿಡದ ಒಂದೇ ಸಮಾಜವಾಗಿರುವದು. ಪೂರ್ವಿಕರು ಹಾಕಿದ ನಿಬಂಧನೆಯು ಈ ಉಭಯಸಮಾಜಗಳು ಪರಸ್ಪರ ಬಿಟ್ಟು ಬಾಳುವದಕ್ಕೆ ಸಾಧ್ಯವಾಗದಷ್ಟು ಬಲವತ್ತರವಾಗಿರುವದು. ಇನ್ನೂ ವೈಶ್ಯರು ಬ್ರಾಹ್ಮಣರ ಸಹಾಯದಿಂದ ತಮ್ಮ ಹಕ್ಕುಬಾಧ್ಯತೆಗಳನ್ನು ಸಂಪಾದಿಸಿಕೊಂಡು ತಮ್ಮ ದ್ವಿಜತ್ವವನ್ನು ಳಿಸಿಕೊಳ್ಳಬೇಕೆಂದಿದ್ದಾರೆ. ಇಂಥಾ ಪರಿಸ್ಥಿತಿಯಿರುವಾಗಲೇ ಉಭಯಸಮಾಜದವರೂ ಪರಸ್ಪರ ಸಹಾಯಕರಾಗಿ ನಡೆಯಬೇಕು. ಇದರಿಂದ ಉಭಯಸಮಾಜಗಳ ಕಲ್ಯಾಣವಾಗಬೇಕು.

ಕಾಂಡತ್ರಯಾತ್ಮಕವಾದ ವೇದದ ಉದ್ಧಾರವೇ (ವೇದಾಭ್ಯಾಸ) ದ್ವಿಜರ ಉದ್ಧಾರವೆಂದು ವಿದ್ಯಾರಣ್ಯರಂಥಾ ರಾಜಕಾರಣ ಪಟುಗಳೂ ವೇದಾಂತಿಗಳೂ ಅಪ್ಪಣೆಕೊಡಿಸಿದರು. ಈ ಮಾತನ್ನು ಅಕ್ಷರಶಃ ಸತ್ಯಗೊಳಿಸುವದು ಪ್ರತಿ ದ್ವಿಜನ ಕರ್ತವ್ಯ.

ಈ ಭಾವನೆಗಳು ಆರ್ಯವೈಶ್ಯ ಮಹಾಜನಗಳ ಮನಸ್ಸಿಗೆ ಬರುವದಾದರೆ, ಬ್ರಾಹ್ಮಣರು ಅನಾದಿಯಾಗಿ ನಡೆದುಬಂದಿರುವ ತಮ್ಮ ಗುರುತ್ವವನ್ನು ಳಿಸಿಕೊಂಡು ವೈಶ್ಯರಿಗೆ ಬೆಂಬಲರಾಗುವರಾದರೆ, ಈ ಉಭಯ ಸಮಾಜಗಳ ಉದ್ಧಾರ ಮಾತ್ರವಲ್ಲ—ಈ ಆದರ್ಶದಿಂದ ಇಡೀ ಹಿಂದೂ ಸಮಾಜದ ಉದ್ಧಾರವೇ ಕ್ರಮೇಣ ಆಗುವದರಲ್ಲಿ ಸಂಶಯವಿಲ್ಲ.

**ಬೇಲೂರು ಕೇಶವದಾಸ.**



ಶ್ರೀ

# ಕನ್ಯಕಾ ಪುರಾಣ.

## ಮೊದಲನೇ ಅಧ್ಯಾಯ

• — • — • — • — •

### ಅಮ್ಮನವರ ಧ್ಯಾನಶ್ಲೋಕಗಳು



*ಶ್ಲೋ॥ ಅರುಣಾಂ ಕರುಣಾಮೂರ್ತಿಂ ಕುಮಾರೀಂ ನವಯುವ್ವನಾಂ
ಸರ್ವಶೃಂಗಾರವೇಷಾಢ್ಯಾಂ ಮಂದಸ್ಮಿತ ಮುಖಾಂಬುಜಾಂ ೧

ಆಂಧ್ರದೇಶೆ ಘನಗಿರೌ ವೈಶಾಖದಶಮೀತಿಥೌ
ಜಾತಾಂ ಗೋದಾವರೀತೀರೇ ಗೋದಾಂ ತಾಂ ಕನ್ಯಕಾಂ ಭಜೇ ೨

ಕೃತೇತು ಭಾರ್ಗವೀಂ ದೇವೀಂ ತ್ರೇತಾಯಾಂ ಜನಕಾತ್ಮಜಾಂ
ದ್ವಾಪರೇ ರುಕ್ಮಿಣೀಂ ದೇವೀಂ ಕಲೌವಾಸವ ಕನ್ಯಕಾಂ ೩

ಭಜಾಮಿ ಸುಮುಕನ್ಯಕಾಂ ಭಯಸಮೂಹ ಸಮ್ಮೋಚಕಾಂ
ಜನಾರ್ದನವಿಕರ್ತನ ಪ್ರಥಿತಕಾಂತಿರೂಪಾಕೃತಿಂ
ಸುಭಾರ್ಗವದಿನೋದಿತಾಂ ಸುಮವರಾರ್ಯ ಸಂವರ್ಧಿತಾಂ
ಸುಕೀರ್ತಿ ಪರಿಶೋಭಿತಾಂ ಶುಭಸಮೂಹ ಸಂಸೇವಿತಾಂ ೪

---

*ವೈಶ್ಯಜಾತಿಯವರು ಸ್ವಾಭಾವಿಕವಾಗಿ ಸಂಪ್ರದಾಯಪಾಲಕರು. ಗುರುದೇವತಾ ಧ್ಯಾನಮಾಡಿ ಪುರಾಣಪಠನೆ ಮಾಡುವದು ಸಂಪ್ರದಾಯಸ್ಥರಿಗೆ ವಿಹಿತವು.

# ಶ್ರೀ ಭಾಸ್ಕರಾಚಾರ್ಯರ ಧ್ಯಾನಶ್ಲೋಕಗಳು



ವಂದೇ ಶ್ರೀಭಾಸ್ಕರಾರ್ಯಂ ವರಗುಣಸಹಿತಂ ಬ್ರಹ್ಮವಂಶ ಪ್ರಸೂತಂ
ವಂದ್ಯಂ ವೇದಾಂತವೇದ್ಯಂ ಪ್ರಥಿತವರಯಶೋವಶ್ಯ ವೈಶ್ಯಾಗ್ರಜಾತಂ
ಭಸ್ಮಚ್ಛನ್ನತ್ರಿಪುಂಡ್ರ ಪ್ರಕಟಿತ ವಿಲಸತ್ಫಾಲ ರುದ್ರಾಕ್ಷಮಾಲಂ
ಹಸ್ತಾಬ್ಜೇ ಧಾರಯಂತಂ ಸ್ಫಟಿಕಮಣಿಯುತಂಚಾಕ್ಷಮಾಲಾಂ ಜಪಂತಂ ೧

ಪ್ರಾತಃಸ್ಮರಾಮಿ ನಿಖಿಲಾಘ ನಿವೃತ್ತಿಹೇತೋಃ
ಪ್ರಜ್ಞಾಪ್ರಭಾವಪರಿರಕ್ಷಿತ ವೈಶ್ಯಕೋಟಿಂ
ರುದ್ರಾಕ್ಷಬಿಲ್ವತುಲಸೀಕೃತ ಮಾಲಿಕಾಭಿಃ
ಪ್ರಖ್ಯಾತ ದಿವ್ಯತನುಶೋಭಿತ ಸೂರ್ಯವರ್ಯಂ



ಮೇಲ್ಕಂಡ ಧ್ಯಾನಶ್ಲೋಕಗಳನ್ನು ಪಠಿಸುವವರಿಂದ ಎಂತಹ ವೈಶ್ಯನಿಗೂ ತಾನಾರು? ತನ್ನ ಕುಲಧರ್ಮವೇನು? ತನ್ನ ಕರ್ತವ್ಯವೇನು? ಎಂಬಷ್ಟು ವಿಚಾರವಾದರೂ ಬರದಿರುವದಿಲ್ಲ. ಪ್ರತಿ ಪ್ರಾತಃಕಾಲದಲ್ಲೂ ಈ ಧ್ಯಾನಶ್ಲೋಕಗಳನ್ನು ಪಠಿಸುವವರಿಂದ ಧರ್ಮಪ್ರವೃತ್ತಿಯೂ ದೈವಭಕ್ತಿಯೂ ಮನೋನೈರ್ಮಲ್ಯವೂ ಉಂಟಾಗುವವರಲ್ಲಿ ಸಂಶಯವಿಲ್ಲ. ಗುರ್ವನುಗ್ರಹ ಲಕ್ಷ್ಮೀಕಟಾಕ್ಷಗಳನ್ನು ಪಡೆದವರಿಗೆ ಪರಮಪದವೇ ಪುರುಷಾರ್ಥವು. ಪ್ರತಿ ವೈಶ್ಯನೂ ಕನಿಷ್ಠಪಕ್ಷ ಈ ಧ್ಯಾನಶ್ಲೋಕಗಳನ್ನು ಪಠಿಸಿ ತನ್ನ ಉದ್ಯಮವನ್ನಾರಂಭಿಸಲೆಂದು ಪ್ರಾರಂಭದಲ್ಲಿ ಈ ಶ್ಲೋಕಗಳನ್ನು ಕೊಡಲಾಗಿದೆ.



ಶ್ರೀಮನ್ನಾರಾಯಣ.

# ಕಥಾಪ್ರಾರಂಭ.

ಪೂರ್ವದಲ್ಲಿ ಶಾಲಂಕಾಯನನೆಂಬ ಮಹಾಮುನಿಯಿದ್ದನು. ಆತನು ಶಿಷ್ಯವೃಂದ ಸಹಿತ ನೈಮಿಷಾರಣ್ಯದಲ್ಲಿ ತಪಸ್ಸುಮಾಡುತ್ತಿದ್ದನು. ಮುನಿಯು ಶ್ರುತಿಸ್ಮೃತಿ ಪುರಾಣಜ್ಞನಾಗಿದ್ದುದು ಮಾತ್ರವಲ್ಲ, - ಶ್ರುತಿಸ್ಮೃತಿ ಪುರಾಣಗಳಲ್ಲಿ ಯಾವದು ಅತ್ಯಂತ ಗೋಪ್ಯವೋ, ಯಾವದು ಅತ್ಯಂತ ದುರ್ಲಭವೋ, ಅಂಥಾ ತತ್ವಗಳನ್ನು ಸುಲಭವಾಗಿ ಶಿಷ್ಯರಿಗೆ ಉಪದೇಶಿಸಲು ಸಮರ್ಥನಾಗಿಯೂ ಇದ್ದನು. ಆದುದರಿಂದ ಬಹುಜನರು ಮುನಿಯ ಶಿಷ್ಯರಾಗಿದ್ದರು. ಶಾಲಂಕಾಯನನ ಆವಾಸವಾದ ನೈಮಿಷಾರಣ್ಯವಾದರೂ ಸಾಮಾನ್ಯ ಕ್ಷೇತ್ರವಲ್ಲ.

ಸತ್ಯಲೋಕಾಧಿಪನಾದ ಚತುರಾಸ್ಯನಿಂದ ನಿರ್ಮಿತವಾದ ವಿಮಾನವು ಒಂದಾನೊಂದು ಕಾಲದಲ್ಲಿ ನಿಮ್ನವೂ ಉನ್ನತವೂ ಆದ ಈ ವನಪ್ರಾಂತ್ಯದಲ್ಲಿ ಸಂಚರಿಸುತ್ತಿತ್ತು. ಸಂಚಾರಕಾಲದಲ್ಲಿ ಅದರ ನೇಮಿಭಂಗವಾಗಲು ಈ ವನಪ್ರಾಂತ್ಯದಲ್ಲಿ ವಿಮಾನವು ಧ್ವಸ್ತವಾಯಿತು. ಅಂದಿನಿಂದ ಈ ವನಕ್ಕೆ ನೈಮಿಷಾರಣ್ಯವೆಂದು ಹೆಸರು ಪ್ರಸಿದ್ಧವಾಯಿತು. ತೃಣಕಾಷ್ಠ ಜಲಪರ್ಣಗಳಿಂದಲೂ, ಕಂದ ಮೂಲ ಫಲಾದಿಗಳಿಂದಲೂ ಸಮೃದ್ಧವಾಗಿದ್ದುದರ ಜೊತೆಗೆ ನೈಮಿಷಾರಣ್ಯವೆಂಬ ನಾಮಗೌರವವೂ ಬಂದುದರಿಂದ ಈ ವನವನ್ನು ಬಲು ಮಂದಿ ಋಷಿಮುನಿಗಳು ಕ್ರಮೇಣ ಆಶ್ರಯಿಸಿದರು. ಕಾಲಕ್ರಮದಲ್ಲಿ ಇಂಥಾ ಪಾವನಕ್ಷೇತ್ರವೇ ಮತ್ತೊಂದಿಲ್ಲವೆಂದು ಭೂತಲದಲ್ಲಿ ಪ್ರಸಿದ್ಧಿಯಾಯಿತು. ಪ್ರಪಂಚಸಾಮಾನ್ಯಕ್ಕೇ ಪುರಾಣಗಳ ಉಪ

ದೇಶವಾದದ್ದು ಈ ವನದಲ್ಲಿ. ಈ ವನದಲ್ಲಾಗದ ಭಗವತ್ಪೂಜಾದಿಗಳಿಲ್ಲ. ಈ ವನದಲ್ಲಾಗದ ಭಗವತ್ಕಥಾ ಶ್ರವಣಗಳಿಲ್ಲ ಈ ವನದಲ್ಲಾಗದ ವ್ರತಾನುಷ್ಠಾನಗಳಿಲ್ಲ. ಈ ವನದಲ್ಲಿ ತಪಶ್ಚರ್ಯ್ಯಮಾಡಿ ಸಿದ್ಧಿಹೊಂದದ ಮುನಿಗಳಿಲ್ಲ. ಈ ವನದಲ್ಲಿ ಭಗವಂತನು ತೋರಿಸದ ವಿಭೂತಿ ವಿಶೇಷಗಳೂ ಇಲ್ಲ. ಇಂಥಾ ವನದಲ್ಲಿ ಶಾಲಂಕಾಯನ ಮುನಿಯು ಐಹಿಕಾಮುಷ್ಮಿಕ ಫಲದಾಯಕಗಳಾದ ಭಗವತ್ಕಥಾ ಶ್ರವಣ ಮಾಡಿಸುತ್ತಿರಲು, ವೈಶ್ಯಗಣೇಶ್ವರರಾದ ಮುನಿಗಳು ಆತನ ಬಳಿಗೆಬಂದು ಆ ಮುನಿಗೆ ನಮಸ್ಕರಿಸಿ, ಅಂಜಲಿಬದ್ಧರಾಗಿ ಹೀಗೆಂದು ವಿಜ್ಞಾಪಿಸಿದರು.

ಮುನಿವರ್ಯ! ಇಷ್ಟುಕಾಲ ತಮ್ಮ ಮುಖೇನ ದಿವ್ಯಕಥಾ ಶ್ರವಣ ಮಾಡಿವೆವು. ಇದರಿಂದ ನಮ್ಮ ಜನ್ಮಗಳು ಪಾವನವಾದವು. ಈ ದಿನ ತ್ರಯಗಳಲ್ಲಿ (ದಶಮಿ‌ಏಕಾದಶೀ ದ್ವಾದಶೀ) ತಾವು ಉಪದೇಶಿಸಿದ ಮಂತ್ರಮಹಿಮೆಯಿಂದ ನಮಗಾದ ಆನಂದವನ್ನು ವರ್ಣಿಸಲು ಸಾಧ್ಯವಲ್ಲ. ಮಂತ್ರಶ್ರವಣ ಮಾತ್ರದಿಂದ ನಮ್ಮ ಕರ್ಣಗಳು ಪಾವನವಾದವು. ಮಂತ್ರೋಚ್ಚಾರಣೆಯಿಂದ ನಮ್ಮ ಜಿಹ್ವೆಗಳು ಪವಿತ್ರವಾದವು. ಮಂತ್ರಮನನದಿಂದ ನಮ್ಮ ಚಿತ್ತಶುದ್ಧಿಯಾಯಿತು. ಮುಖ್ಯವೇನು, ತಮ್ಮಿಂದ ನಮ್ಮ ಉದ್ಧಾರವಾಯಿತು. ಆದರೂ ತಮ್ಮ ಮುಖದಿಂದ ಇನ್ನೂ ವಿಶೇಷ ವಿಚಿತ್ರ ಕಥಾಶ್ರವಣ ಮಾಡಬೇಕೆಂಬ ಆಶೆಯು ನಮ್ಮನ್ನು ಬಿಟ್ಟಿಲ್ಲ. ನಮ್ಮ ಪವಿತ್ರ ವೈಶ್ಯಗೋತ್ರ ಪರಂಪರೆಯನ್ನು ತಮ್ಮದಯಾಪಾತ್ರರಾದ ನಮಗೆ ಉಪದೇಶಿಸುವ ಕೃಪೆಯಾಗಬೇಕು. ಲಕ್ಷ್ಮೀಪತಿಯಾದ ನಾರಾಯಣನು ಜನಾರ್ದನನೆಂಬ ಹೆಸರಿನಿಂದ ವೈಶ್ಯರಿಗೆ ಪ್ರಸನ್ನನಾದ ಬಗೆಹೇಗೆ? ಸವಿಾಚೀನವಾದ ಸಾತ್ವಿಕ ಪೂಜಾದಿಗಳಿಂದ ಪ್ರಸನ್ನನಾಗುವ ಮಹಾದೇವನು ನಗರೇಶ್ವರ ನಾಮದಿಂದ ವೈಶ್ಯಮುನೀಶ್ವರರಿಗೆ ಭೂತಲ

ದಲ್ಲಿ ಪ್ರಾಪ್ತನಾದ ಬಗೆಹೇಗೆ? ಸೃಷ್ಟಿಕರ್ತನಾದ ವಿಧಾತನು ಭೂಮಿ ಯಲ್ಲಿ ಅವತರಿಸುವನಲ್ಲವಾದರೂ ಅಂಶತ್ವೇನ ನಮ್ಮ ಕುಲಗುರು ಭಾಸ್ಕರಾಚಾರ್ಯರಾದ ಬಗೆಹೇಗೆ? ವೈಶ್ಯರಿಗೆ 'ನಗರ' ನಾಮ ದಿಂದ ಲೋಕವಿಖ್ಯಾತಗಳಾದ ಹದಿನೆಂಟು ಪಟ್ಟಣಗಳು ದೊರೆತ ಬಗೆಹೇಗೆ? ಈ ಕಥೆಗಳನ್ನೆಲ್ಲಾ ವಿಸ್ತಾರವಾಗಿ ಉಪದೇಶಿಸಿ ನಮ್ಮನ್ನು ಕೃತಾರ್ಥರನ್ನು ಮಾಡಬೇಕು, ಎಂದು ಮೊದಲಾಗಿ ಪ್ರಾರ್ಥಿಸಿದರು.

ಈ ರೀತಿ ಪ್ರಾರ್ಥಿತನಾದ ಶಾಲಂಕಾಯನ ಮುನಿಯು ಕ್ಷಣ ಮಾತ್ರ ಧ್ಯಾನಾಸಕ್ತಚಿತ್ತನಾಗಿದ್ದು ಶ್ರೀಹರಿಯನ್ನೂ ಅಂಬಿಕಾ ನಾಥನಾದ ಮಹಾದೇವನನ್ನೂ ಗಣಪತಿಯನ್ನೂ ವಾಗ್ದೇವಿಯನ್ನೂ ವಾಲ್ಮೀಕಿ ಮುಖ್ಯ ಸುಕವಿಗಳನ್ನೂ ವಂದಿಸಿ, ಸನತ್ಕುಮಾರ ಮುನಿ ಯಿಂದುಪದಿಷ್ಟವಾಗಿದ್ದ ಪುರಾಣಕಥೆಯನ್ನು ಜ್ಞಾಪಕಕ್ಕೆ ತಂದು ಕೊಂಡು ಅದರಂತೆ ವೈಶ್ಯಗಣೇಶ್ವರರಿಗೆ ಉಪದೇಶಮಾಡಿದನು.

ವೈಶ್ಯಮುನಿಗಳೆ, ಕೇಳಿ! ಶ್ರೀಮನ್ನಾರಾಯಣನು ಅನಂತಾ ನಂತ ಜೀವರಾಶಿಗಳ ಉದ್ಧಾರಾರ್ಥವಾಗಿ ಜಗತ್ಸೃಷ್ಟಿಮಾಡ ಬೇಕೆಂದು ಸಂಕಲ್ಪಿಸಿ, ಸತ್ವರಜಸ್ತಮೋಗುಣಗಳನ್ನು ಮೂಲ ಪ್ರಕೃತಿಯಿಂದ ನಿರ್ಮಿಸಿದನು. ಅನಂತರ ಬ್ರಹ್ಮರುದ್ರರಿಗೆ ಶರೀರ ಭೂತಗಳಾದ ಮಹತ್ ಅಹಂಕಾರಗಳೆಂಬ ತತ್ವಗಳ ಸೃಷ್ಟಿಯಾ ಯಿತು. ಆ ವಿರಾಟ್ಪುರುಷನ ಪ್ರಾಣದಿಂದ ದಕ್ಷನುದಿಸಿದನು. ಅಪಾನದಿಂದ ಕ್ರತುವೂ, ವ್ಯಾನ ಉದಾನ ಸಮಾನಗಳಿಂದ ಕ್ರಮ ವಾಗಿ ಪುಲಹ ಪುಲಸ್ತ್ಯ ವಸಿಷ್ಠರೂ ಜನಿಸಿದರು. ವಿರಾಟ್ಪುರುಷನ ಮಸ್ತಕದಿಂದ ಗಗನವೂ ಕರ್ಣಗಳಿಂದ ವಿಶ್ವೇದೇವತೆಗಳೂ ಆದರು. ಅವನ ನೇತ್ರಗಳಿಂದ ಸೂರ್ಯಚಂದ್ರರುದ್ಭವಿಸಿದರು. ಅವನ ಭಾವ ದಿಂದ ಕಾಲ ದೇಶಗಳೂ ಕಾಮನೂ ಜನಿಸಿದರು. ಇಂದ್ರಾಗ್ನಿಗಳೂ

ಬ್ರಾಹ್ಮಣರೂ ವಿರಾಟ್ಪುರುಷನ ಮುಖಜಾತರೆನಿಸಿದರು. ಪೃಷದಶ್ವ ಭೃಗು ಎಂಬುವರು ಹೃದಯಜಾತರೆನಿಸಿದರು. ಬಾಹುಗಳಿಂದ ಕ್ಷತ್ರಿಯರೂ, ನಾಭಿಯಿಂದ ಅಂತರಿಕ್ಷವೂ, ಊರುಗಳಿಂದ ವೈಶ್ಯಮುನಿಗಳೂ, ಪಾದಗಳಿಂದ ಭೂಮಿಯೂ ಶೂದ್ರರೂ ಜನಿಸಿದರು. ಅನಂತರ ಬ್ರಹ್ಮವೇತ್ತರಾದ ಸಕಲ ದೇವತೆಗಳೂ ಯಕ್ಷರಾಕ್ಷಸ ಗಂಧರ್ವ ಗ್ರಹ ನಕ್ಷತ್ರಗಳೂ, ವಸುರುದ್ರಾದಿತ್ಯ ಗಣಗಳೂ, ಸಪ್ತಮಾತೃಕೆಗಳೂ ಸಾಗರ ಪರ್ವತ ಪಕ್ಷಿಸಂಘಗಳೂ ನದಿಗಳೂ ಸರೋವರಗಳೂ ಸ್ಥಿರಚರಾತ್ಮಕವಾದ ಸಕಲ ಪ್ರಪಂಚವೂ ನಿರ್ಮಿತವಾದವು. ಆಗ ಬ್ರಹ್ಮನು ಸಕಲ ಭೂತಗಣಗಳನ್ನೂ ನೋಡಿ ಅವುಗಳಿಗೆ ಆಹಾರ ಆಯುಸ್ಸು ಆಚಾರ ಜೀವನಗಳನ್ನು ಕಲ್ಪಿಸಿದನು. ಸರ್ವ ಪ್ರಾಣಿಗಳಿಗೂ ತತ್ತದ್ಯೋಗ್ಯವಾಸಸ್ಥಾನಗಳೂ ನಿಯಮಿತವಾದವು. ಕಾಲವು ಕೃತ ತ್ರೇತ ದ್ವಾಪರ ಕಲಿಯುಗಗಳಾಗಿ ವಿಭಾಗವಾಯಿತು.

ವೈಶ್ಯಮುನಿಗಳೆ, ಪರಮಾತ್ಮನ ನಿಯಮನ ಶಕ್ತಿಯೆಂಥಾದ್ದು ನೋಡಿರಿ! ಕೃತಯುಗಕ್ಕೆ ಹದಿನೇಳು ಲಕ್ಷದ ಇಪ್ಪತ್ತೆಂಟು ಸಾವಿರ ವರ್ಷಗಳು (೧೭,೨೮,೦೦೦), ತ್ರೇತಾಯುಗಕ್ಕೆ ಹನ್ನೆರಡು ಲಕ್ಷದ ತೊಂಭತ್ತಾರು ಸಾವಿರ ವರ್ಷಗಳು(೧೨,೯೬,೦೦೦), ದ್ವಾಪರಕ್ಕೆ ಎಂಟು ಲಕ್ಷದ ಅರವತ್ತುನಾಲ್ಕು ಸಾವಿರ ವರ್ಷಗಳು (೮,೬೪,೦೦೦), ಕಲಿಯುಗಕ್ಕಾದರೋ ನಾಲ್ಕು ಲಕ್ಷದ ಮೂವತ್ತೆರಡು ಸಾವಿರ ವರ್ಷಗಳು(೪,೩೨,೦೦೦). ಅಂದರೆ ಕಲಿಯುಗದ ಎರಡರಷ್ಟು ಕಾಲ ದ್ವಾಪರವೂ, ಮೂರರಷ್ಟು ಕಾಲ ತ್ರೇತೆಯೂ, ನಾಲ್ಕರಷ್ಟು ಕಾಲ ಕೃತವೂ ವಿಧಾಯಕವಾದವು. ಈ ನಾಲ್ಕು ಯುಗಗಳೂ(೪೩,೨೦,೦೦೦) ಒಂದು ಸಾರಿ ತಿರುಗಿದರೆ ಒಂದು ಮಹಾ ಯುಗವೆನಿಸುವದು ಇಂಥಾ ಎಪ್ಪತ್ತೊಂದು ಮಹಾ ಯುಗಗಳಾದರೆ ಒಂದು ಮನ್ವಂತರವೆನಿಸುವದು. ಇಂಥಾ ಹದಿನಾಲ್ಕು ಮನ್ವಂತರಗಳು ಚತುರ್ಮುಖನಿಗೆ ಒಂದು ಹಗಲಾಗುವದು. ಇದೇ ಮಾನದಿಂದ ರಾತ್ರಿಯಾಗುವದು. - ಹೀಗೆ ಇಪ್ಪ

ತ್ತೆಂಟು ಮನ್ವಂತರಗಳು ಅಥವ ಇಂದ್ರಕಲ್ಪಗಳಾದರೆ ಅದು ಬ್ರಹ್ಮನ ಒಂದುದಿನವಾಗುವದು. ಈ ಮಾನದಿಂದ ನೂರುವರ್ಷಗಳಾದರೆ ಒಂದು ಬ್ರಹ್ಮಕಲ್ಪವೆನಿಸುವದು. ಇಂಥಾ ಎಷ್ಟೋ ಬ್ರಹ್ಮಕಲ್ಪಕೋಟಿಗಳಾದರೂ ಕಾಲಾತೀತನಾದ ಆ ಶ್ರೀಮನ್ನಾರಾಯಣನಿಗೆ ಒಂದು ನಿಮಿಷವಾಗಲಿ, ನಿಮಿಷಾರ್ಧವಾಗಲಿ ಆಗುವದಿಲ್ಲ.

ಆ ನಾರಾಯಣನೇ ಸಕಲ ಜಗದಾಧಾರನು; ಜಗತ್ಸೃಷ್ಟಿಸ್ಥಿತಿಲಯಕರ್ತನು; ವೇದವೇದಾಂತ ನಿರ್ಮಾತನು; ವೇದಗಳಿಗೂ ಅಗೋಚರನು. ಇಂಥಾ ಮಹಾಮಹಿಮನಾದ ಪರಮಾತ್ಮನು ತನ್ನ ಬಲತೊಡೆಗಳಿಂದವತರಿಸಿದ ವಿನಯಸಂಪನ್ನರಾದ ಏಳನೂರ ಹದಿನಾಲ್ಕು ಮೂಲ ವೈಶ್ಯಮುನಿಗಳನ್ನು ನೋಡಿ ಕೇವಲ ಪುತ್ರವಾತ್ಸಲ್ಯದಿಂದ ಆ ಮಕ್ಕಳಿಗೆ ಜಾತಕರ್ಮಾದಿಗಳನ್ನು ಮಾಡಿದನು. ಇವರ ಜೀವಿಕೆಗಾಗಿ ಕೃಷಿವಾಣಿಜ್ಯ ಗೋರಕ್ಷಣಾದಿ ವೃತ್ತಿಗಳನ್ನು ಕಲ್ಪಿಸಿದನು. ಅತ್ಯಂತ ಕೃಪೆಯಿಂದ ಧರ್ಮಾಧರ್ಮ ವಿವೇಕವನ್ನೂ ಸರ್ವವಸ್ತು ಪರಿಜ್ಞಾನ ವಿದ್ಯೆಯನ್ನೂ ವಾಣಿಜ್ಯವನ್ನೂ ಉಪದೇಶಿಸಿದನು. ಅಂದಮೇಲೆ ಅವನ ಪುತ್ರವಾತ್ಸಲ್ಯವೆಂಥಾದ್ದೆಂದಾಗಲಿ, ಆದಿವೈಶ್ಯಮುನಿಗಳ ಭಾಗ್ಯವೆಂಥಾದ್ದೆಂದಾಗಲಿ ವರ್ಣಿಸುವ ಬಗೆಹೇಗೆ? ಅನಂತರ ಈ ಬಾಲಕರಿಗೆ ಹನ್ನೆರಡನೇ ವಯಸ್ಸಿನಲ್ಲಿ ಶರತ್ಕಾಲದಲ್ಲಿ ಉಪನಯನವಾಯಿತು. ಹೀಗೆ ದಿನದಿನಕ್ಕೂ ವೃದ್ಧಿಯನ್ನೈದುತ್ತಿರುವ ಯುವಕರಿಗೆ ತನ್ನ ವಾಮೋರು ಸಂಭವೆಯರಾದ ಏಳನೂರ ಹದಿನಾಲ್ಕು ಕನ್ನಿಕೆಯರನ್ನು ಕೊಟ್ಟು ಕ್ರಮವಾಗಿ ತಾನೇ ವಿವಾಹಮಾಡಿದನು. ವಿವಾಹಿತರಾದ ದಂಪತಿಗಳು ಸತ್ಯಲೋಕದಲ್ಲಿ ಸನಕಾದಿ ಕುಮಾರರಿಂದ ಸತ್ಕಥಾಶ್ರವಣಮಾಡುತ್ತಾ ಆನಂದದಿಂದಿರುತ್ತಿದ್ದರು.

ಹೀಗಿರಲು ದೇವತೆಗಳು ಇವರನ್ನು ನೋಡಿ—ಮುನಿಗಳಿರಾ, ನಿಮ್ಮ ಅಭ್ಯುದಯವನ್ನು ನೋಡಿ ನಮಗೆ ಪರಮಾನಂದವಾಗಿದೆ.

ನೀವು ಇನ್ನು ಮುಂದೆ ಮಧ್ಯಮಲೋಕವೆಂದು ಸಂಜ್ಞಿತವಾಗಿರುವ ಭೂಲೋಕದಲ್ಲಿದ್ದು ಆಯುರಾರೋಗ್ಯಸಂಪನ್ನರಾಗಿ ಸುಖದಿಂದ ಶ್ರೀಹರಿಯನ್ನಾರಾಧಿಸುತ್ತಾ ವಾಸಮಾಡಿರೆಂದು ಆಜ್ಞೆಯಿಂತ್ತವರು. ಈ ಮಾತನ್ನುಕೇಳಿ ಖಿನ್ನಮನಸ್ಕರಾದ ವೈಶ್ಯರು ಬ್ರಹ್ಮನ ಬಳಿಗೆ ಬಂದು ನಮಸ್ಕರಿಸಿ, 'ದೇವದೇವ, ಜಗಜ್ಜನನಕಾರಣ, ನಾವು ನಿನ್ನವರೇ ಆಗಿರುವೆವು. ನಿನ್ನ ದಯಾಪಾತ್ರರಾಗಿರುವೆವು. ದೇವತೆಗಳು ನಮ್ಮನ್ನು ಭೂಲೋಕಕ್ಕೆ ಕಳುಹಿಸಬೇಕೆಂದಿರುವರು. ನಿನ್ನ ಮಕ್ಕಳಂತಿರುವ ನಮ್ಮನ್ನು ಕೃಪಾದೃಷ್ಟಿಯಿಂದ ನೋಡು. ಸತ್ಯಲೋಕದಲ್ಲಿ ತಪಶ್ಚರ್ಯಮಾಡಿಕೊಂಡಿರಲು ನಮಗೆ ಆಜ್ಞೆಯನ್ನು ಕೊಡು. ಮಧ್ಯಮಲೋಕಕ್ಕೆ ನಮ್ಮನ್ನು ಕಳುಹಿಸಿ ಪರದೇಶಿಗಳನ್ನಾಗಿ ಮಾಡಬೇಡ' ವೆಂದು ಮೊದಲಾಗಿ ಪ್ರಾರ್ಥಿಸಿದರು. ಇವರ ವಿಜ್ಞಾಪನೆಯನ್ನು ಕೇಳಿ ವಿಧಾತನು, ಮುನಿಗಳಿರಾ, ಭೂಲೋಕವೆಂದರೆ ಪಾಪಲೋಕವೆಂದೆಣಿಸಿದಿರಾ? ಭೂಲೋಕದಲ್ಲಿ ಸತ್ಯವಿಲ್ಲವೆ? ಸತ್ಯವಂತ ಪ್ರಜೆಗಳಿಲ್ಲವೆ? ಬ್ರಹ್ಮವಿಷ್ಣುಮಹೇಶರ ಲೋಕಗಳು ಸಾಮಾನ್ಯರಿಗೆ ಲಭಿಸುವವಲ್ಲವೆಂಬುದನ್ನು ತಿಳಿಯಿರಾ? ಅರಿಷಡ್ವರ್ಗವನ್ನು ಜೈಸಿ ವಿಶೇಷ ತಪಶ್ಚರ್ಯದಿಂದ ಭೂಲೋಕದಲ್ಲಿದ್ದು ಸಾಧನಪೂರ್ತಿಮಾಡಿಕೊಳ್ಳುವಿರಾದರೆ ನಿಮಗಲ್ಲದೆ ಮತ್ತಾರಿಗೆ ಈ ಲೋಕಗಳಿರುವವು? ನೀವಾದರೋ ಬುದ್ಧಿವಂತರು. ಇಲ್ಲಿ ಮಾಡುವ ತಪಸ್ಸನ್ನು ಭೂಲೋಕದಲ್ಲಿದ್ದು ಮಾಡಿರಿ. ಶ್ರೀಹರಿಯನುಗ್ರಹವನ್ನು ಸಂಪಾದಿಸಿರಿ. ನಿಮಗೆ ಕಲ್ಯಾಣವಾಗುವದು, ಎಂದು ಸಮಾಧಾನಗೊಳಿಸಿ ವೈಶ್ಯಮುನಿಗಳಿಗೆ ಮಹಾಮಂತ್ರಗಳನ್ನುಪದೇಶಿಸಿದನು.

ವೇದಪುರುಷನಾದ ಬ್ರಹ್ಮನಿಂದಲೇ ಮಂತ್ರೋಪದೇಶಗೊಂಡವರಾದುದರಿಂದ ಮಂತ್ರದ ಸ್ವರ ವರ್ಣೋಚ್ಚಾರ ಕ್ರಮನ್ಯಾಸ ವಿಧಿ ಮಂತ್ರಾರ್ಥಗಳನ್ನೆಲ್ಲಾ ಚನ್ನಾಗಿ ತಿಳಿದ ವೈಶ್ಯಮುನಿಗಳು ಉಗ್ರ

ತಪಶ್ಚರ್ಯದಿಂದ ಶಾಶ್ವತವಾಗಿ ಸತ್ಯಲೋಕವನ್ನು ಸಾಧಿಸುವೆವೆಂದು ನಿಶ್ಚಯಿಸಿ, ವಿಧಾತನಿಗೆ ಪ್ರಣಾಮಮಾಡಿ ಭೂಲೋಕವನ್ನು ಕುರಿತು ಪ್ರಯಾಣಮಾಡಿದರು. ಬರುವ ಮಾರ್ಗದಲ್ಲಿ ಶುಕಪಿಕ ಶಾರಿಕೆಗಳ ಕಲಕಲ ನಿನಾದವನ್ನು ಕೇಳುತ್ತಾ, ಪುಣ್ಯವನಗಳಲ್ಲಿ ಕೋಮಲವಾಗಿ ಬೆಳೆದಿರುವ ಲತೆಗುಲ್ಮಗಳ ಸೌಕುಮಾರ್ಯವನ್ನು ನೋಡಿ ಆನಂದಿಸುತ್ತಾ, ವಿಧವಿಧವಾದ ಭಗವನ್ಮಹಿಮೆಗಳನ್ನು ಪರಸ್ಪರ ಹಾಡಿ ಪಾಡುತ್ತಾ, ಅಲ್ಲಲ್ಲಿ ದೃಷ್ಟಿಗೋಚರವಾಗುವ ಆಶ್ರಮಗಳನ್ನು ಇದ್ಯಾರ ಆಶ್ರಮ ಅದ್ಯಾರ ಆಶ್ರಮವೆಂದು ಕೇಳಿ ತಿಳಿದುಕೊಳ್ಳುತ್ತಾ, ಆಶ್ರಮವಾಸಿ ಮಹಾಮುನಿಗಳನ್ನು ಕಂಡು ವಂದನೆಮಾಡುತ್ತಾ, ಮೃಗಜಾತಿ ಪಕ್ಷಿಜಾತಿಗಳು ಪರಸ್ಪರ ವೈರಭಾವವನ್ನು ತೊರೆದು ಅನ್ಯೋನ್ಯವಾಗಿ ಕ್ರೀಡಿಸುತ್ತಿರುವದನ್ನು ಕಂಡು ಆಶ್ಚರ್ಯಪಡುತ್ತಾ, ಹಂಸಪಕ್ಷಿಗಳು ಸರೋವರಗಳಲ್ಲಿ ಮೃದುವಾದ ಕಮಲನಾಳಗಳನ್ನು ಮುರಿಮುರಿದು ತಿನ್ನುತ್ತಿರುವ ಸೊಬಗನ್ನು ನೋಡುತ್ತಾ, ಎಲ್ಲ ಋತುಗಳ ಫಲಪುಷ್ಪಗಳನ್ನು ಎಲ್ಲಕಾಲದಲ್ಲೂ ಕೊಡುತ್ತಿರುವ ವೃಕ್ಷಗಳನ್ನು ನೋಡಿ ಸತ್ಯಲೋಕವನ್ನು ಬಿಟ್ಟುಬಂದ ನಮಗೆ ಇದೇ ಕಲ್ಪವೃಕ್ಷ, ಮತ್ತಿದೇ ಕುಬೇರನ ವನ, ಇದೇ ಇಂದ್ರನ ನಂದನವನವೆಂದು ಆ ವೃಕ್ಷಗಳ ನೆಳಲಿನಲ್ಲಿ ನಿಶ್ರಮಿಸಿಕೊಳ್ಳುತ್ತಾ, ಶುಕಶಾರಿಕೆಗಳ ಮುಖದಿಂದಲೂ ಶ್ರುತಿಪುರಾಣ ವಾಕ್ಯಗಳ ಕಲಕಲ ಧ್ವನಿಯಾಗುತ್ತಿರುವದನ್ನಾಲೈಸಿ, ಇದೇ ಸತ್ಯವಂತರಾದ ಮುನಿಗಳು ತಪಸ್ಸು ಮಾಡುತ್ತಿರುವ ಸತ್ಯಲೋಕವೆಂದು ಕೊಂಡಾಡುತ್ತಾ, ಹಸಿವು ತೃಷೆಗಳನ್ನು ಮರೆತು, ಮಾರ್ಗಾಯಾಸವನ್ನು ಗಣನೆಮಾಡದೆ, ಪರಮಾತ್ಮನ ಸೃಷ್ಟಿವೈಚಿತ್ರ್ಯವನ್ನು ನೆನೆನೆನೆದು ಕೊಂಡಾಡುತ್ತಿದ್ದರು.

ಇನ್ನೂ ಮುಂದೆ ಮುಂದೆ ದಟ್ಟವಾಗಿ ಬೆಳೆದಿರುವ ಅರಣ್ಯಪ್ರಾಂತ್ಯವನ್ನು ಪ್ರವೇಶಿಸಿ ಜಂಬೂಪ್ಲಕ್ಷವಟ ಅಶ್ವತ್ಥಕಪಿತ್ಥ

ಖರ್ಜೂರ ಕದಳಿ ಚೂತ ಮಾಲೂಕ ಮಾತುಲಂಗ ಪುನ್ನಾಗ ಚಂಪಕಾ ಮಲ್ಲಿಕಾಶೋಕ ಕೇಸರ ಮಾಧವೀ ಬಕುಳ ಮೊದಲಾದ ವೃಕ್ಷಗಳಿಂದ ನಿಬಿಡೀಕೃತವಾಗಿರುವ ಆಶ್ರಮಗಳ ಮಧ್ಯದಲ್ಲಿ, ಕಶ್ಯಪ ಭರದ್ವಾಜ ಪುಲಸ್ತ್ಯ ಪುಲಹ ಕ್ರತು ಪರತಂತು ಕುತ್ಸ ಸನಕಸನಂದನ ಯಾಜ್ಞ ವಲ್ಕ್ಯ ದೇವವಲ್ಕ್ಯ ಹರಿವಕ್ತ್ರ-ಆಶ್ವಲಾಯನ ಋಷ್ಯಶೃಂಗ ಶ್ರೀವತ್ಸ ಶ್ರೀಜಟ ವಾಲಿಖಿಲ್ಯ ಮೃಕಂಡು ಮಾರ್ಕಂಡೇಯ ಅಗಸ್ತ್ಯ ಮೊದ ಲಾದ ಬ್ರಹ್ಮರ್ಷಿಗಳಿಂದ ಆವಾಸವಾದ ಪುಣ್ಯಸ್ಥಳ ಪುಣ್ಯಭೂಮಿ ಗಳಲ್ಲಿ ಅವಿಚ್ಛಿನ್ನವಾಗಿ ನಡೆಯುತ್ತಿರುವ ಹೋಮ ಧೂಮಗಂಧ ವನ್ನಾಘ್ರಾಣಿಸಿ, ಈ ತಪೋವನವೇ ಆಗಂತುಕಜನರ ಮನೋಭೀಷ್ಟ ಗಳನ್ನು ವರ್ಷಗರೆಯುವ ಕಾಮಧೇನು ಕಲ್ಪವೃಕ್ಷ ಚಿಂತಾಮಣಿ ಗಳೆಂದು ಕೊಂಡಾಡಿ, ಆ ಮುನಿಗಳನ್ನಭಿವಂದಿಸಿ, ಅವರ ತಪಶ್ಚರ್ಯ ಕ್ಕನುವಾದ ಫಲಪುಷ್ಪಗಳನ್ನು ತಂದು ಸಮರ್ಪಿಸುತ್ತಾ, ನಾವೂ ಇಲ್ಲಿ ತಪಸ್ಸುಮಾಡಿ ಸಿದ್ಧಿ ಹೊಂದಬೇಕೆಂದು ಆ ಮಹಾಮುನಿಗಳ ಆಶ್ರಮ ದಲ್ಲಿ ಆಶ್ರಯವನ್ನು ಪಡೆದರು.

ಕಶ್ಯಪಾದಿ ಬ್ರಹ್ಮರ್ಷಿಗಳಾದರೋ—ತಮ್ಮ ಬಳಿಗೆ ಅತಿಥಿ ಅಭ್ಯಾಗತರಂತೆ ಬಂದಿರುವ ವೈಶ್ಯಗಣೇಶ್ವರರನ್ನು ಸತ್ಕರಿಸಿ, ಅವರ ತಪಸ್ಸಾಧನೆಗೆ ಬೇಕಾದ ಅನುಕೂಲಗಳನ್ನು ಕಲ್ಪಿಸಿ, ತಮ್ಮ ಶಿಷ್ಯ ಕೋಟಿಯಲ್ಲಿ ವೈಶ್ಯಮುನೀಶ್ವರರನ್ನು ಪರಿಗ್ರಹಿಸಿ ಅವರ ತಪಶ್ಚರ್ಯಕ್ಕೆ ಸಹಾಯಮಾಡಿದರು.

ಅಂದಿನಿಂದಲೇ ವೈಶ್ಯಮುನಿಗಳ ತಪಸ್ಸಿಗಾರಂಭವಾಯಿತು. ಆರಂಭದಲ್ಲಿ ಮುನಿಗಳು ಪ್ರತೀಕಾಲಂಬನರಾಗಿ ಮಂತ್ರಪುರಶ್ಚರಣೆ ಮೂರ್ತಿಪೂಜಾ ಷಡ್ರಸೋಪೇತಗಳಾದ ದಿವ್ಯಾನ್ನಗಳ ನಿವೇದನ ಧೂಪದೀಪ ನಾಮಪೂಜಾದಿಗಳಿಂದ ಸ್ವಾಮಿಯನ್ನು ಸಂತುಷ್ಟಿಗೊಳಿಸಿ ದರು. ಅಷ್ಟಾಂಗ ಯೋಗಗಳಾದ ಆಸನ ಪ್ರಾಣಾಯಾಮಗಳ

ಅಭ್ಯಾಸ ಬಂದಹಾಗೆ ಕ್ರಮೇಣ ಇವರ ಬಹಿರ್ಮುಖ ಪೂಜೆಗಳು ಅಂತರ್ಮುಖವಾಗುತ್ತ ಬಂದವು. ಕೆಲವುಕಾಲ ಫಲಾಹಾರಗಳಿಂದಲೂ, ಕೆಲವುಕಾಲ ಕಂದಮೂಲಗಳಿಂದಲೂ, ಅನಂತರ ಜಲಪಾನದಿಂದಲೂ ದೇಹಧಾರಣೆಮಾಡಿದರು. ಅನಂತರ ಜಲಪಾನವನ್ನೂ ತ್ಯಜಿಸಿ ಕೇವಲ ನಿರಾಹಾರರಾಗಿ ಉಗ್ರತಪಸ್ಸಿಗಾರಂಭಿಸಿದರು. ವರ್ಷಾಕಾಲ ದಲ್ಲಿ ವೃಕ್ಷಗಳ ನೆಳಲಿನಲ್ಲೂ, ಛಳಿಗಾಲದಲ್ಲಿ ಸರೋವರಗಳ ಜಲ ಮಧ್ಯದಲ್ಲೂ, ಗ್ರೀಷ್ಮಕಾಲದಲ್ಲಿ ಬಿಸಿಲಿನಿಂದ ಕಾದ ಕಠಿಣ ಶಿಲೆಗಳ ಮೇಲೂ ನಿಂತು ತಪಸ್ಸುಮಾಡಿದರು. ಈ ವಿಧವಾದ ತಪಸ್ಸಿನಿಂದ ಮುನಿಗಳ ದೇಹಶುದ್ಧಿ ಚಿತ್ತಶುದ್ಧಿ ತಪಸ್ಸಿದ್ಧಿಗಳೆಲ್ಲಾ ಉಂಟಾದವು.

ಬಹುಕಾಲಾನಂತರ ಈ ಮಹಾಮುನಿಗಳ ತಪಸ್ಸಿಗೆ ಸಂತುಷ್ಟ ನಾಗಿ ಸಾಕ್ಷಾನ್ಮಹಾದೇವನು ಪಾರ್ವತಿಯಿಂದೊಡಗೂಡಿ ಪ್ರತ್ಯಕ್ಷ ನಾದನು. ನಂದಿವಾಹನನೂ ಚಂದ್ರಚೂಡನೂ ಗಂಗಾಧರನೂ ಕಪಾಲಪಾಣಿಯೂ ತ್ರಿಶೂಲಡಮರುಗಧಾರಿಯೂ ಗಜಚರ್ಮಾಂಬರ ನೂ ಪಿನಾಕಪಾಣಿಯೂ ಭಸಿತಭೂಷಿತನೂ ರುಂಡಮಾಲಿಯೂ ಆದ ಪರಮೇಶ್ವರನನ್ನು ನೋಡಿ ಮುನಿಗಳು ಪುಳುಕಿತಗಾತ್ರರಾಗಿ ಸಾಷ್ಟಾಂಗ ಪ್ರಣಾಮಮಾಡಿದರು. ದೇವದೇವನೆ, ಜಲಂಧರ ಗಜ ವ್ಯಾಘ್ರಾಸುರಾದಿ ಮಹಾರಾಕ್ಷಸ ಸಂಹರ್ತನೆ, ಜನನಸ್ಥಿತಿ ಮರಣ ಹೇತುಗಳಾದ ತ್ರಿಗುಣಗಳ ಧುರಂಧರನೆ, ಮೃತ್ಯುಂಜಯನೆ, ಮಾರ್ಕಂಡೇಯ ವರದನೆ, ಕರುಣಾಕರನೆ, ಶಂಕರನೆ, ಪಾಹಿಪಾಹಿ ಯೆಂದು ಸ್ತೋತ್ರಮಾಡಿದರು. ಅಡಿಗಡಿಗೂ ಸ್ವಾಮಿಗೆ ನಮಸ್ಕರಿಸಿ ಅಂಜಲಿಬದ್ಧರಾಗಿ, ಪಾರ್ವತೀಪತಿಯಲ್ಲೇ ಸನ್ನಿವಿಷ್ಟಚಿತ್ತರಾಗಿ, ಆ ಮಹಾದೇವನ ಅಮೃತವಾಣಿಯನ್ನು ನಿರೀಕ್ಷಿಸುತ್ತಾ, ಆವನ ದಿವ್ಯ ನಾಮೋಚ್ಚಾರಣೆಮಾಡುತ್ತಾ ನಿಂತುಕೊಂಡರು.

ಕೃಪಾದೃಷ್ಟಿಯಿಂದ ಅಮೃತವೃಷ್ಟಿಗರೆಯುತ್ತಿರುವ ಮಹಾದೇವನು ಮಂದಹಾಸದಿಂದಲೂ ಗಂಭೀರವಾಣಿಯಿಂದಲೂ ವೈಶ್ಯಮುನಿಗಳನ್ನು ಕುರಿತು -'ಮಕ್ಕಳಿರಾ, ನಿಮ್ಮ ತಪಶ್ಚರ್ಯದಿಂದ ನಾನು ಸಂತುಷ್ಟನಾದೆನು. ನಿಮ್ಮ ಮನೋವಾಂಛಿತವೇನಿದ್ದರೂ ಅದನ್ನು ಕೊಡುವೆನು. ಬೇಕಾದುದನ್ನು ಬೇಡಿರಿ' ಎಂದು ಆಜ್ಞೈಗೈದನು.

ವೈಶ್ಯಮುನಿಗಳು -'ಮಹಾದೇವ, ನಾವು ಬೇಡುವದು ಮತ್ತೇನಿಲ್ಲ. ನಾವು ನಮ್ಮ ಪತ್ನೀಪುತ್ರ ಸಮೇತರಾಗಿ ನಿನ್ನ ದಿವ್ಯಲೋಕದಲ್ಲಿ ನಿನ್ನ ಭಕ್ತಗಣಗಳಿಂದೊಡಗೂಡಿ, ಸರ್ವದಾ ನಿನ್ನ ದರ್ಶನ ಮಾಡುತ್ತಾ, ನಿನ್ನನ್ನು ಸೇವಿಸುತ್ತಾ, ಚಿರಕಾಲ ನಿನ್ನ ಸನ್ನಿಧಿಯಲ್ಲಿ ಜೀವಿಸುವೆವು. ಇಷ್ಟುಮಾತ್ರ ಕೃಪೆಮಾಡು' ಎಂದು ಬೇಡಿದರು.

ಮಹಾದೇವನು ತಥಾಸ್ತು ಎಂದು ಅಂತರ್ಧಾನನಾದನು.



# ಎರಡನೇ ಅಧ್ಯಾಯ

ಪರಮೇಶ್ವರನ ಪ್ರಸಾದದಿಂದ ಪ್ರಸನ್ನರಾದ ವೈಶ್ಯಮುನಿಗಳು ಕೈಲಾಸ ಪರ್ವತವನ್ನು ಸೇರಿದರು. ಸ್ವರ್ಗಲೋಕಕ್ಕಿಂತ ಶತಾಧಿಕ ಸಂಪತ್ತಿನಿಂದ ವಿರಾಜಿಸುತ್ತಿರುವ ಮಹಾದೇವನ ಒಡ್ಡೋಲಗವನ್ನು ನೋಡಿ ಮುನಿಗಳು ವಿಸ್ಮಿತರಾದರು. ಸತ್ಯಲೋಕಕ್ಕೆ ಸಮಾನವಾದ ಸೌಭಾಗ್ಯವೇ ತಮಗೆ ದೊರೆಯಿತೆಂದು ಅವರು ತೃಪ್ತರಾದರು. ಕೈಲಾಸದಲ್ಲಿ ದೇವದೇವನ ದರ್ಶನಕ್ಕೆ ಬರುತ್ತಿರುವ ಮುನಿಗಳೇನು, ಆವನ ನಿರಂತರ ಸೇವೆಯಲ್ಲಿ ನಿರತರಾದ ಗಣಾಧಿಪರೇನು, ಸನಕಸನಂದನ ಸನತ್ಸುಜಾತ ಸನತ್ಕುಮಾರರುಗಳೇನು, ಪರಶಿವನನ್ನು ದಿವ್ಯಗಾಯನ ನರ್ತನಗಳಿಂದ ತಲೆದೂಗಿಸುವ ಅಪ್ಸರೆಯರೇನು, ಇಂಥವರಿಂದೊಡಗೂಡಿ ಆ ದಿವ್ಯಲೋಕದ ತೇಜಸ್ಸಿನಲ್ಲಿ, ಆ ಉದ್ಯಾನ ವನಗಳಲ್ಲಿ, ಆ ವಾಪೀಕೂಪ ತಟಾಕಗಳ ತಡಿಯಲ್ಲಿ, ಆ ಕ್ರೀಡಾಮಂಟಪಗಳಲ್ಲಿ, ಆ ದಿವ್ಯ ವೃಕ್ಷಛಾಯೆಗಳಲ್ಲಿ, ಲೋಕಪಾಲಕರಂತೆ ಬಹುಕಾಲ ದಿವ್ಯಭೋಗಗಳನ್ನನುಭವಿಸಿದರು.

ಹೀಗಿರಲು ಒಂದಾನೊಂದು ದಿನ ಇಂದ್ರಾದಿ ದಿಕ್ಪಾಲಕರು ಪಶುಪತಿಯ ದರ್ಶನಕ್ಕೆ ತಮ್ಮ ತಮ್ಮ ವಿಭವಯುಕ್ತರಾಗಿ ಒಡ್ಡೋಲಗದಲ್ಲಿ ಬಂದು ಕುಳಿತಿದ್ದರು. ನಾರದ ತುಂಬುರರ ಗಾಯನವಾಗುತ್ತಿತ್ತು. ಅಪ್ಸರೆಯರು ನರ್ತನಮಾಡುತ್ತಿದ್ದರು. ಯಕ್ಷರಾಕ್ಷಸ ಗಂಧರ್ವಾದಿಗಳೂ, ಸಕಲ ಭೂತಗಣಗಳೂ, ಏಕೋನಪಂಚಾಶನ್ಮರುತ್ತುಗಳೂ, ಕೈಲಾಸಪತಿಯನ್ನು ಕೈವಾರಿಸುತ್ತಿದ್ದರು. ಪರಶಿವನು ಪರಶಿವೆಯ ಮೃದುಮಧುರವಾದ ಭಕ್ತಾನುಗ್ರಾಹಕವಾದ ಮಾತು

ಗಳನ್ನು ಕೇಳುತ್ತಾ, ದಿವ್ಯಸಿಂಹಾಸನದಲ್ಲಿ, ಕೇಳಿದವರಿಗೆ ಕೇಳಿದುದನ್ನೆಲ್ಲಾ ಕೊಡುವೆನೆಂಬ ಅಭಿಸಂಧಿಯಿಂದ ಕುಳಿತಿದ್ದನು. ಇಂಥಾ ಮಹಾಸಭೆಯಲ್ಲಿ ವೈಶ್ಯಮುನಿಗಳು ತಂತಮ್ಮ ಪತ್ನೀಸಮೇತರಾಗಿ ಮಾನ್ಯರಾಗಿ ಸಭೆಯನ್ನಲಂಕರಿಸಿದ್ದರು. ಆಗ ಕುಬೇರನು ಸ್ವಾಮಿಯ ಬಳಿಗೆಬಂದು ಭಕ್ತಿಯಿಂದ ನಮಸ್ಕರಿಸಿ, ವೈಶ್ಯಮುನಿಗಳ ಕಡೆಗೆ ಕೈತೋರಿಸುತ್ತಾ, ಹೀಗೆಂದನು :—

'ದೇವ! ಈ ವೈಶ್ಯಮುನಿಗಳು ನಿನ್ನ ಸೇವಾತತ್ಪರರಾಗಿ ಭೂಲೋಕಕ್ಕೆ ಹೋಗದೆ ಈ ಲೋಕದಲ್ಲಿ ನೆಲೆಸಿರುವರು. ಎಂಥವರಿಗೂ ಅಲಭ್ಯವಾದ ನಿನ್ನ ಸನ್ನಿಧಾನ ನಿನ್ನ ಸೇವೆಗಳು ಇವರಿಗೆ ದೊರೆತಿರುವದು ನಮಗಾದರೂ ಸಂತೋಷವೇ ಸರಿ. ಆದರೆ ಭೂಲೋಕದ ಗತಿ ಏನು? ಒಬ್ಬ ವೈಶ್ಯನಾದರೂ ಇನ್ನೂ ಭೂಲೋಕಕ್ಕೆ ಹೋಗಲಿಲ್ಲ. ಕೃಷಿ ಗೋಪಾಲನ ವಾಣಿಜ್ಯವೃತ್ತಿಗಳು ಹೇಗೆ ಅಭಿವೃದ್ಧಿ ಹೊಂದಬೇಕು? ಬ್ರಹ್ಮರ್ಷಿಗಳೆಲ್ಲಾ ಭೂಲೋಕವನ್ನಾಶ್ರಯಿಸಿ ತಪಶ್ಚರ್ಯದಲ್ಲಿರುವಾಗ ಇವರು ಇಲ್ಲಿರುವ ವಿಶೇಷವೇನು? ಜಗದ್ವ್ಯಾಪಾರ ನಡೆಯುವ ಬಗೆಹೇಗೆ? ಭೂಲೋಕವು ಶೂನ್ಯವಾದರೆ ಮಿಕ್ಕ ಲೋಕಗಳ ಗತಿಯೇನು? ಕೃಪೆಮಾಡಿ ಇವರನ್ನು ಭೂಲೋಕಕ್ಕೆ ಕಳುಹಿಸು. ನನ್ನ ಸಾಹಸದ ಮಾತನ್ನು ಕ್ಷಮಿಸು', ಎಂದು ವಿಜ್ಞಾಪಿಸಿದನು.

ಕುಬೇರನ ಮಾತನ್ನು ಕೇಳಿ ಶೂಲಪಾಣಿಯು ವೈಶ್ಯರನ್ನು ದಯಾದೃಷ್ಟಿಯಿಂದ ನೋಡಿ,-'ವತ್ಸರಿರಾ, ನಿಮ್ಮ ಇಷ್ಟದಂತೆ ಬಹುಕಾಲ ಕೈಲಾಸವಾಸ ನಿಮಗಾಯಿತು. ಧನದನು ಲೋಕಹಿತ ಬುದ್ಧಿಯಿಂದ ಹೇಳಿದುದನ್ನು ಪ್ರಕಾರಾಂತರ ತಿಳಿಯಬೇಡಿರಿ. ನೀವು ಸಂಪದಭಿವೃದ್ಧಿಗಾಗಿ ಭೂಲೋಕಕ್ಕೆ ಪ್ರಯಾಣವಾಡಿರಿ' ಎಂದು ಆಜ್ಞೆಗೈದನು. ವೈಶ್ಯರು ನಿರುಪಾಯರಾದರು. ಧನದನಲ್ಲಿಯು ಶತ್ರು

ಮಾದನೆಂದಂದುಕೊಂಡರು. ಧೈರ್ಯಮಾಡಿ, -'ದೇವ! ಅತ್ಯಂತ ತಪಸ್ಸಿನಿಂದ ನಿನ್ನೀ ಸನ್ನಿಧಾನವನ್ನು ಪಡೆದಿರುವ ನಮ್ಮನ್ನು ದಯಾ ದೃಷ್ಟಿಯಿಂದ ನೋಡು. ಭೂಲೋಕಕ್ಕೆ ಹೋಗುವದೆಂದರೆ ಮಹಾ ರತ್ನವನ್ನು ಪರಿತ್ಯಜಿಸಿ ಗಾಜಿನ ತುಂಡನ್ನು ತೆಗೆದುಕೊಂಡಂತಲ್ಲವೆ? ನಿನ್ನನ್ನು ಬಿಟ್ಟು ನಾವು ಬಾಳಲಾರೆವು. ನಮಗೀ ಕ್ರೂರಶಾಸನ ಮಾಡಬೇಡ' ಎಂದು ಪ್ರಾರ್ಥಿಸಿದರು. ಮತ್ತೆ ನೀಲಕಂಠನು, 'ಮುನಿಗಳೆ,—ಲೋಕಚಕ್ಷುವಾದ ಸೂರ್ಯನು ಲೋಕೋಪಕಾರಾರ್ಥ ಭ್ರಮಣಮಾಡುವನು. ಚಂದ್ರನೂ ಅಗ್ನಿಯೂ ಭೂಮಿಯೂ ವಾಯುವೂ ಲೋಕೋಪಕಾರಕ್ಕಾಗಿ ಒಂದೊಂದು ಕಾರ್ಯದಲ್ಲಿ ನಿಯಮಿತರಾಗಿರುವರು. ನೀವಾದರೂ ಲೋಕಸ್ಥಿತ್ಯರ್ಥವಾಗಿ ಭೂಲೋಕವನ್ನು ನಿಮ್ಮ ಕಾರ್ಯಕ್ಷೇತ್ರವಾಗಿ ಮಾಡಿಕೊಳ್ಳಬೇಕು. ನೀವಿದ್ದ ಬಳಿಯಲ್ಲಿ ನಾನೂ ಬಂದಿರುವೆನು. ನಾನು ನಗರೇಶ್ವರ ನೆಂಬ ನಾಮದಿಂದಲೂ ಶಿವೆಯು ವಿಂಧ್ಯವಾಸಿನಿಯೆಂಬ ನಾಮ ದಿಂದಲೂ ನಿಮ್ಮ ಸಂತೋಷಾರ್ಥವಾಗಿ ಭೂಮಿಯಲ್ಲಿ ಬಂದು ನೆಲೆಸು ವೆವು. ನೀವು ಸಂಶಯಪಡಬೇಡಿರಿ. ಸ್ವಕರ್ಮಾನುಷ್ಠಾನದಿಂದ ನಿಮಗೆ 'ತದ್ವಿಷ್ಣೋಃ ಪರಮಂಪದಂ' ಎಂಬ ಶ್ರುತ್ಯುಕ್ತ ಮುಕ್ತಿ ಸ್ಥಾನವು ದೊರೆಯುವದು. ನನ್ನಾಜ್ಞೆಯನ್ನು ಪಾಲಿಸುವದರಿಂದ ನಿಮಗೆ ಶ್ರೇಯಸ್ಸುಂಟಾಗುವದು. ನಿಮ್ಮ ಪ್ರಯಾಣಕ್ಕೆ ನಂದಿಯು ಸಹಾಯಕನಾಗುವನು. ಆವನ ದಕ್ಷಿಣ ಕರ್ಣವನ್ನವಲಂಬಿಸಿ ಪುರು ಷರೂ ವಾಮಕರ್ಣಾವಲಂಬನೆಯಿಂದ ಸ್ತ್ರೀಯರೂ ಏಕಕಾಲದಲ್ಲಿ ಪ್ರಯಾಣಮಾಡಬಹುದು. ನಂದಿಯು ನಿಮ್ಮನ್ನು ಬೇಕಾದಬಳಿಗೆ ಕರೆದೊಯ್ಯುವನು.'

ಈಶ್ವರನ ಮಾತಿಗೆ ಪ್ರತಿಹೇಳುವದು ಮುನಿಗಳಿಗೆ ದುಸ್ಸಾಧ್ಯ ವಾಯಿತು. ಚತುರಾನನನ ಬಳಿಗೆ ಮತ್ತೊಮ್ಮೆ ಹೋಗಿ ಬೇಡಿ

ಕೊಳ್ಳುವೆವೆಂದು ನಂದಿಯ ಕರ್ಣಗಳ ದ್ವಾರಾ ಸತ್ಯಲೋಕಕ್ಕೆ ತೆರಳಿದರು. ವಿಧಾತನ ಪಾದಗಳಿಗೆರಗಿ—'ಪಿತಾಮಹ! ಉಮಾಪತಿಯೂ ನಮ್ಮನ್ನು ಭೂಲೋಕಕ್ಕೆ ಹೋಗಬೇಕೆಂದು ನಿಯಮನಮಾಡಿದನು. ಅಥವಾ ಮರ್ತ್ಯಲೋಕದಲ್ಲಿದ್ದು ನಾವೇನು ಮಾಡೋಣ? ಅಲ್ಪಾಯುಗಳೂ ಅಲ್ಪಮತಿಗಳೂ ಅಲ್ಪತೇಜಸ್ಕರೂ ಆಗಿ, ದೈವಜ್ಞಾನ ಶೂನ್ಯರಾಗಿ, ತುಚ್ಛಪ್ರಾಪಂಚಿಕ ವಿಷಯಗಳಲ್ಲಿ ಆಸಕ್ತರಾಗುವ ನಮ್ಮ ಉದ್ಧಾರದ ಬಗೆಯೇನು? ನೀನಾದರೂ ನಮ್ಮ ಮೇಲೆ ಕೃಪೆಮಾಡು.' ಎಂದು ಪರಿಪರಿಯಾಗಿ ಬೇಡಿಕೊಂಡರು. ಬ್ರಹ್ಮನು,—'ಮುನಿಗಳೆ, ನಾನಾಗಲಿ, ಶಂಭುವಾಗಲಿ, ಇಂದ್ರನಾಗಲಿ, ದೇವತೆಗಳಾಗಲಿ, ಸುರಮುನಿಗಳಾಗಲಿ, ಶ್ರೀಹರಿಯ ಆಜ್ಞೆಯಂತೆ ನಡೆಯುವವರು. ನಮ್ಮ ಸ್ವಾತಂತ್ರ್ಯವೇನಿರುವದು? ಶ್ರೀಹರಿ ಸಂಕಲ್ಪವನ್ನು ಮೀರಿ ನಡೆಯಲು ಯಾರೂ ಸಮರ್ಥರಲ್ಲ. ಅವನಾಜ್ಞೆಯಂತೆ ನಡೆದು, ಅವನ ಅನುಗ್ರಹಕ್ಕೆ ಪಾತ್ರರಾಗಬೇಕಾದುದು ನಿಮ್ಮ ಕರ್ತವ್ಯ. ಭೂಲೋಕವಾಸವು ನಿಮಗೆಂದಿಗೂ ತಪ್ಪುವುದಿಲ್ಲ. ಶ್ರೀಹರಿಯ ಸನ್ನಿಧಿಗೆ ಹೋಗಿ, ಅವನ ದರ್ಶನಮಾಡಿ, ಅವನ ಪ್ರಸನ್ನತೆಯನ್ನೂ ಪಡೆದು, ಭೂಲೋಕ ಗಮನಮಾಡುವುದು ನಿಮಗೆ ಶ್ರೇಯಸ್ಕರವು. ಕಲಿಯುಗದಲ್ಲಾದರೋ—ವೇದಧರ್ಮವು ಖಿಲವಾಗಿ ಜನರು ನಾಸ್ತಿಕರಾಗುವರು. ವರ್ಣಾಶ್ರಮ ಧರ್ಮಗಳು ಲುಪ್ತವಾಗಿ ಜನರು ಪರಿತಪಿಸುವರು. ನಿಮ್ಮ ಸಂತತಿಯವರು ಧರ್ಮಕರ್ಮ ಜ್ಞಾನಶೂನ್ಯರಾಗಿ ಕರ್ತವ್ಯಮೂಢರಾಗಿ ಪ್ರಾಪಂಚಿಕ ಸೌಭಾಗ್ಯದಲ್ಲಿ ಮಗ್ನರಾಗುವರು. ಅಂಥಾ ಸಮಯದಲ್ಲಿ ಮಹಾದೇವನಂತೆ ನಾನೂ ನಿಮಗೆ ಸಹಾಯಕನಾಗುವೆನು. ಭಾಸ್ಕರಾಚಾರ್ಯ ರೂಪದಿಂದ ವೈಶ್ಯಧರ್ಮದ ಪುನರುದ್ಧಾರಮಾಡಿ ನಿಮ್ಮ ಕುಲಗುರುವಾಗುವೆನು' ಎಂಬದಾಗಿ ಅಪ್ಪಣೆಯಿತ್ತನು.

ವೈಶ್ಯಮುನಿಗಳಿಗೆ ಬ್ರಹ್ಮನ ಮಾತಿನಿಂದಲೂ ಮನಸ್ಸಿನ ಸಂಶಯ ಪರಿಹಾರವಾಗಲಿಲ್ಲ. ಸತ್ಯಲೋಕವಾಸದ ಆಶೆ ಬಿಡಲಿಲ್ಲ. ಈಶ್ವರಾಜ್ಞೆಯಿಂದ ಹೇಗೂ ತಮ್ಮನ್ನು ನಂದಿಯು ಎಲ್ಲಿಗೆ ಬೇಕಾದರೂ ಕರೆದೊಯ್ಯುತ್ತಿರುವದರಿಂದ ಈ ಸಮಯದಲ್ಲೀ ಮಹಾವಿಷ್ಣುವಿನ ವೈಕುಂಠವನ್ನೂ ನೋಡಿಬಿಡಬೇಕೆಂದು ಕ್ಷೀರಾಬ್ಧಿ ಮಧ್ಯಪ್ರದೇಶಕ್ಕೆ ಬಂದರು. ಸುರೇಶ್ವರೇಶ್ವರನಾದ ನಾರಾಯಣನು ದಿವ್ಯವೈಕುಂಠದಲ್ಲಿ ಶಂಖಚಕ್ರಗದಾಪದ್ಮಪಾಣಿಯಾಗಿ ಪೀತಾಂಬರಧಾರಿಯಾಗಿ ದಿವ್ಯಸಿಂಹಾಸನದಲ್ಲಿ ಮಂಡಿತನಾಗಿದ್ದನು. ಬ್ರಹ್ಮಾದಿದೇವತೆಗಳೂ ದಿಕ್ಪಾಲರೂ ದ್ವಾದಶಾದಿತ್ಯರೂ ಗರುಡೋರಗ ವಿದ್ಯಾಧರ ಕಿನ್ನರ ಕಿಂಪುರುಷರೂ ಸನಕಾದಿ ಮುನಿಗಳೂ ಸ್ವಾಮಿಯನ್ನು ಕೈವಾರಿಸುತ್ತಿದ್ದರು. ಶಿವಲೋಕ ಸತ್ಯಲೋಕಗಳಲ್ಲಿ ನೋಡಿದ ದೇವತೆಗಳೇ ವೈಕುಂಠದಲ್ಲಿರುವದನ್ನು ಕಂಡು ಆಶ್ಚರ್ಯಭರಿತರಾದರು. ತಪಶ್ಶಕ್ತಿಯಿಂದಲೂ ದೈವಾನುಗ್ರಹದಿಂದಲೂ ದೇವತೆಗಳು ಸರ್ವಾಂತರ್ಯಾಮಿಗಳಾಗಿರುವರೆಂದು ಆ ದೇವತೆಗಳಲ್ಲಿ ಪೂಜ್ಯಭಾವವನ್ನು ತಾಳಿದರು. ಸೂತ ಮಾಗಧರ ಸ್ತೋತ್ರಪಾಠಗಳೇನು, ನಾರದಾದಿಗಳ ಗಾನವೇನು, ರಂಭಾದ್ಯಪ್ಸರೆಯರ ನರ್ತನವೇನು, ಒಂದೊಂದೂ ಮುನಿಗಳಿಗಾನಂದವನ್ನುಂಟುಮಾಡಿದವು. ಅಭಕ್ತರಿಗೆ ದುರಾಸದವಾದ ಶ್ರೀಹರಿಸನ್ನಿಧಿಯಲ್ಲಿ ನಿಂತು, ಲಕ್ಷ್ಮೀಸಹಾಯನೂ ಅಚ್ಯುತನೂ ವಾಸುದೇವನೂ ಆದ ಪರಮಾತ್ಮನನ್ನು ಮುನಿಗಳು ಹೀಗೆ ಸ್ತೋತ್ರಮಾಡಿದರು.

'ಸರ್ವಲೋಕ ಶರಣ್ಯನೆ, ಜಿಷ್ಣುನಾಮಕ ವಿಷ್ಣುವೆ, ನಿನಗೆ ನಮಸ್ಕಾರ. ಗಜೇಂದ್ರವರದನೆ, ಪಾರ್ಥಸಖನೆ, ದ್ರೌಪದೀಮನೋಭೀಷ್ಟದಾಯಕನೆ, ನಿನಗೆ ನಮಸ್ಕಾರ. ಉತ್ತಾನಪಾದ ರಾಜಕುವರನಾದ ಧ್ರುವನಿಗೆ ಧ್ರುವಸಾಮ್ರಾಜ್ಯವನ್ನಿತ್ತ ವಾಸುದೇವನೆ, ನಿನಗೆ

ನಮಸ್ಕಾರ. ಹಿರಣ್ಯಕಶಿಪುವಿನ ಉದರಭೇದನದಲ್ಲಿ ಪಟುವಾದ ನಖಾಗ್ರವುಳ್ಳವನೆ, ನಿನಗೆ ನಮಸ್ಕಾರ. ಪ್ರಹ್ಲಾದವರದನೆ, ನರಸಿಂಹನೆ, ನಿನಗೆ ನಮಸ್ಕಾರ. ರಾವಣಾನುಜನಾದ ವಿಭೀಷಣನಿಗೆ ಲಂಕಾಸಾಮ್ರಾಜ್ಯವನ್ನಿತ್ತವನೆ, ನಿನಗೆ ನಮಸ್ಕಾರ. ಅಹಲ್ಯಾದುಃಖನಾಶಕನೆ, ಪತಿತಪಾವನನೆ, ತಾರಕಬ್ರಹ್ಮನೆ, ನಿನಗೆ ನಮಸ್ಕಾರ. ಶಿವಧನುರ್ಭಂಗದಲ್ಲಿ ಬಾಹುಪರಾಕ್ರಮವನ್ನು ತೋರಿಸಿದವನೆ, ನಿನಗೆ ನಮಸ್ಕಾರ. ದೇವ! ನಿನ್ನನ್ನು ವಾಕ್ಕಿನಿಂದ ವರ್ಣಿಸುವದಕ್ಕಾಗಲಿ, ಮನಸ್ಸಿನಿಂದ ಧ್ಯಾನಿಸುವದಕ್ಕಾಗಲಿ, ಸತ್ಕರ್ಮಗಳಿಂದ ಸಂತುಷ್ಟಿಗೊಳಿಸುವದಕ್ಕಾಗಲಿ, ನಾವು ಶಕ್ತರಲ್ಲ. ನಾವು ನಿನ್ನ ಭೃತ್ಯಭೃತ್ಯಭೃತ್ಯರ ಕಿಂಕರರೂ ದಾಸರೂ ಆಗಿರುವೆವು. ನಮ್ಮಂಥ ದೀನರನ್ನು ಸಂರಕ್ಷಿಸುವದು ಜಗದ್ರಕ್ಷಾದೀಕ್ಷಿತನಾದ ನಿನಗೆ ಏನು ಭಾರ? ನಮ್ಮನ್ನು ಭೂಲೋಕದಲ್ಲಿ ವಾಸಮಾಡಿರೆಂದು ಶಂಕರನು ಆಜ್ಞೆಗೈಯ್ದನು. ವಿಧಾತನೂ ಹಾಗೆಯೇ ಹೇಳಿದನು. ಭೂಲೋಕ ವಾಸದಿಂದ ನಮ್ಮ ಅಭ್ಯುದಯವು ಹೇಗಾದೀತು? ಭೂಲೋಕಕ್ಕೆ ಹೋಗುವದೆಂದರೆ, ಕಲ್ಪವೃಕ್ಷದಲ್ಲಿ ವಿದ್ಯಮಾನವಾದ ಮಕರಂದಪಾನಮಾಡುವ ಭ್ರಮರಗಳು ಅರ್ಕಪುಷ್ಪಗಳನ್ನಾಶ್ರಯಿಸಿದಂತಲ್ಲವೆ? ದೇವಲೋಕವನ್ನು ಬಿಟ್ಟು ಮರ್ತ್ಯಲೋಕಕ್ಕೆ ನಾವು ಹೋಗಲಾರೆವು. ನಮ್ಮಲ್ಲಿ ಕೃಪೆಮಾಡು. ನಮ್ಮನ್ನು ಇಲ್ಲಿಂದ ಕಳುಹಿಸಬೇಡ' ಎಂದು ಪರಿಪರಿಯಾಗಿ ಸ್ವಾಮಿಯನ್ನು ಪ್ರಾರ್ಥನೆ ಮಾಡಿದರು.

-'ಈ ಪ್ರಕಾರ ವೈಶ್ಯಮುನಿಗಳಿಂದ ವಿಜ್ಞಾಪಿತನಾದ ಮಹಾವಿಷ್ಣುವು ಪ್ರೀತಮನಸ್ಕನಾಗಿ ಮಂದಹಾಸದಿಂದ ಮುನಿಗಳನ್ನು ಕುರಿತು ಭಾವೀವೃತ್ತಾಂತಸೂಚಕವಾದ ಮಾತುಗಳನ್ನಾಡಿದನು.

ಮುನಿಗಳೆ, ನೀವು ಭೂಲೋಕಕ್ಕೆ ಹೋಗದಿರುವದರಿಂದ ಭೂತಲವು ಶೂನ್ಯಲೋಕವಾಗುವದು. ಕೃಷಿಗೋಪಾಲನ ವಾಣಿಜ್ಯ ವೃತ್ತಿಗಳೂ ರತ್ನಪರೀಕ್ಷಾದಿ ವಿದ್ಯಗಳೂ ಇಲ್ಲದಂತಾಗಿ ಭೂಲೋಕವು ನಾಶವನ್ನೈದುವದು. ನೀವು ನಿಶ್ಚಿಂತರಾಗಿ ಶಿವನಾಜ್ಞೆಯಂತೆ ಭೂಲೋಕಕ್ಕೆ ಪ್ರಯಾಣಮಾಡಿರಿ. ನಿಮ್ಮ ರಕ್ಷಣೆಯ ಭಾರವು ಎಲ್ಲಿದ್ದರೂ ನನ್ನದಾಗಿರುವದು. ಕಲಿಯುಗದಲ್ಲಿ ನಾನು ಜನಾರ್ದನನೆಂಬಭಿಧಾನದಿಂದ ನಿಮ್ಮ ಕುಲದೈವವಾಗಿ ಪ್ರಸನ್ನನಾಗುವೆನು. ಲಕ್ಷ್ಮಿಯು ನನ್ನಾಜ್ಞೆಯಂತೆ ಕೋನಕಮಲಾ ನಾಮದಿಂದ ನಿಮಗೆ ಪ್ರಸನ್ನಳಾಗುವಳು. ಚತುರ್ಮುಖನು ನಿಮ್ಮನ್ನು ಭೂತಲದಲ್ಲಿ ಶುಭಸ್ಥಾನದಲ್ಲಿ ಪ್ರತಿಷ್ಠಿಸುವನು. ವಿಶ್ವಕರ್ಮನು ದಿವ್ಯಮಂದಿರಗಳನ್ನೂ ಪಟ್ಟಣಗಳನ್ನೂ ನಿರ್ಮಿಸಿಕೊಡುವನು. ವಾಣಿಜ್ಯದಲ್ಲಿ ಲಕ್ಷ್ಮಿಯು ಅಭಿವೃದ್ಧಿಯನ್ನೂ ಧನಧಾನ್ಯಸಮೃದ್ಧಿಯನ್ನೂ ಮಾಡಿಕೊಡುವಳು. ನನ್ನ ಆಜ್ಞಾಪಾಲಕರಾದ ನಿಮಗೆ ನಾನೇ ಸಹಾಯಕನಾಗಿರುವೆನು. ಈ ವಿಚಾರದಲ್ಲಿ ವೇದಶಾಸ್ತ್ರ ವಿಧಿಯೇನಿರುವದೆಂಬುದನ್ನು ಕೇಳಿ!

ಯಾವ ಮನುಷ್ಯನು ಬ್ರಹ್ಮನನ್ನು ತಿಳಿಯುವನೋ ಅವನು ಬ್ರಾಹ್ಮಣನೆನಿಸುವನು. ಬ್ರಹ್ಮಜಾತಿಯ ಗುಣವು ಸತ್ವಗುಣವು. ಬ್ರಾಹ್ಮಣವೃತ್ತಿಯು ತಪಶ್ಚರ್ಯವು. ಬ್ರಾಹ್ಮಣರಿಗೆ ವಿಹಿತವಾಗಿರುವದು ಸಾಮವೇದವು. ನಾನು ಸತ್ವಗುಣನಿಯಾಮಕನು; ಅದರಿಂದ ಅವರ ಕುಲದೈವವಾಗಿರುವೆನು. ಲೋಕರಕ್ಷಣದೀಕ್ಷಿತರಾದ ಕ್ಷತ್ರಿಯರ ಗುಣವು ಸತ್ವಮಿಶ್ರಿತವಾದ ರಜೋಗುಣವು. ಅವರ ಕುಲದೈವವು ರುದ್ರನು. ರುದ್ರಾರಾಧನೆಯಿಂದ ಅವರು ನನ್ನನ್ನು ಹೊಂದಬೇಕು. ಕ್ಷತ್ರಿಯರಿಗೆ ವಿಹಿತವಾಗಿರುವದು ಯಜುರ್ವೇದವು.

ವೈಶ್ಯಜಾತಿಯ ಗುಣವು ಸತ್ವಗುಣ ತಮೋಗುಣಗಳಿಂದ ಮಿಶ್ರಿತವಾದ ರಜವು. ಕೃಷಿವಾಣಿಜ್ಯಗೋರಕ್ಷಣೆಗಳು ವೈಶ್ಯವಿಹಿತ

ವೃತ್ತಿಗಳು. ಕಾಲಕಾಲದಲ್ಲಿ ಸುವೃಷ್ಟಿಯನ್ನು ಕೊಟ್ಟು ಭೂಲೋಕವನ್ನು ರಕ್ಷಿಸುವವನು ಇಂದ್ರನು. ಇಂದ್ರನಿಗೆ ಋಗ್ವೇದದಲ್ಲಿ ವಿಶಸ್ಪತಿ (ವಿಶಃ = ವೈಶ್ಯರಿಗೆ ; ಪತಿ = ಸ್ವಾಮಿ) ಯೆಂಬ ಹೆಸರು ಪ್ರಸಿದ್ಧವಾಗಿರುವದು. ಆದುದರಿಂದ ಮಹದೈಶ್ವರ್ಯಸಂಪನ್ನನೂ ಕೃಷಿಕಾರ್ಯಫಲದಾತನೂ ಆದ ಇಂದ್ರನು ನಿಮ್ಮ ಕುಲದೇವತೆಯು. ಆತನ ಮುಖದಿಂದ ವೈಶ್ಯರು ನನ್ನನ್ನಾರಾಧಿಸಬೇಕು. ವೈಶ್ಯರಿಗೆ ವಿಹಿತವಾಗಿರುವದು ಋಗ್ವೇದವು.

ಸ್ತ್ರೀಯರಿಗೂ ಶೂದ್ರರಿಗೂ ಮಂತ್ರಾಧಿಕಾರಕ್ಕೆ ಬದಲಾಗಿ ತಂತ್ರಾಧಿಕಾರವಿರುವದು. ತ್ರೈವರ್ಣಿಕರಿಗನುಕೂಲರಾಗಿ ಲೋಕದ ಸಂಪದಭಿವೃದ್ಧಿಗೈಯುವದು ಶೂದ್ರವಿಹಿತ ಪವಿತ್ರ ಜೀವನವು.

ಆದ್ದರಿಂದ ನೀವು ನಿಮ್ಮ ಸ್ವವೃತ್ತಿಯನ್ನವಲಂಬಿಸಿ ಭೂಲೋಕದಲ್ಲಿ ಸುಖದಿಂದ ಬಾಳಿರಿ.

ಹೀಗೆ ಶ್ರೀಹರಿಯಿಂದ ಆಜ್ಞಪ್ತರಾದ ಮುನಿಗಳು ಮಾಧವನನ್ನು ಕುರಿತು,-'ಸ್ವಾಮಿ, ನಿನ್ನಾಜ್ಞಾಬದ್ಧರಾಗಿ ನಾವು ಭೂಲೋಕಕ್ಕೆ ತೆರಳುವೆವು. ನಮ್ಮ ಸಂದೇಹ ಪರಿಹಾರವಾಯಿತು. ಅಶ್ವಮೇಧ ಯಾಗಗಳಿಂದ ಪ್ರಾಪ್ತವಾದ ಅಲ್ಪವಿಭವಯುಕ್ತನಾದ ಇಂದ್ರನನ್ನು ಆರಾಧಿಸಬೇಕೆಂದು ನೀನು ಮಾಡಿದ ಆಜ್ಞೆಯಿಂದ ನಮಗೆ ಖೇದವಾಗಿರುವದು. ಇಂದ್ರನ ಸಂಪತ್ತು ನಿನ್ನ ಕಟಾಕ್ಷದಿಂದ ಲಬ್ಧವಾದದ್ದು. ನಿನ್ನ ಉಪೇಕ್ಷಾಮಾತ್ರದಿಂದ ಇಂದ್ರನು ಬಹಳಾಪತ್ತುಗಳನ್ನು ಹೊಂದುವನು. ಸರ್ವೋತ್ತಮನಾದ ನಿನ್ನನ್ನು ಬಿಟ್ಟು ಅಲ್ಪನಾದ ಇಂದ್ರನನ್ನಾರಾಧಿಸುವದೆಂತು?' ಎಂಬದಾಗಿ ಪ್ರಶ್ನೆಮಾಡಿದರು.

ವೈಶ್ಯಮುನಿಗಳ ಮಾತನ್ನು ಕೇಳಿ ಕರುಣಾಂಬುಧಿಯಾದ ನಾರಾಯಣನು,—'ವತ್ಸರಿರ, ಯುಗಯುಗಗಳಲ್ಲಿ ನಾನು ಭೂಲೋಕದಲ್ಲವ

ತರಿಸುವೆನು. ಕೃತಯುಗದಲ್ಲಿ ಅತ್ರಿತನಯನಾಗಿ ಬ್ರಾಹ್ಮಣಧರ್ಮವನ್ನು ಪಾಲಿಸುವೆನು. ತ್ರೇತೆಯಲ್ಲಿ ರಘುನಂದನನಾಗಿ ಕ್ಷತ್ರಿಯಧರ್ಮವನ್ನು ಪಾಲಿಸುವೆನು. ದ್ವಾಪರದಲ್ಲಿ ನಂದಸುತನಾಗಿ ಗೋಕುಲವನ್ನು ಪ್ರವೇಶಿಸಿ ವೈಶ್ಯಧರ್ಮವನ್ನು ಪಾಲಿಸುವೆನು. ಆ ಕಾಲದಿಂದ ನೀವು ವೈಶ್ಯಕುಲಾಧೀಶನಾದ ಇಂದ್ರನನ್ನು ಬಿಟ್ಟು ನನ್ನನ್ನು ಸೇವಿಸಿರಿ. ಅಂದಿನಿಂದ ನೀವು ಕೇವಲ ನನ್ನ ಭಕ್ತರೇ ಆಗುವಿರಿ. ಆದ್ದರಿಂದ ಇಂದ್ರೋಪಾಸನಾಭಯವನ್ನು ಬಿಡಿರಿ. ನನ್ನ ಸಹಾಯಕಳಾದ ಲಕ್ಷ್ಮಿಯು ತ್ರೇತೆಯಲ್ಲಿ ಸೀತೆಯಾಗಿ ಅವತರಿಸುವಳು. ಅವಳು ಭೈಷ್ಮಿಯಾಗಿ ದ್ವಾಪರದಲ್ಲಿ ಮತ್ತೆ ನನ್ನನ್ನು ಸೇರುವಳು. ಕಲಿಯುಗದಲ್ಲಿ ಆಕೆಯು ಗೋದಾದೇವಿಯೆಂಬ ನಾಮದಿಂದ ವಿಪ್ರಕುಲದಲ್ಲವತರಿಸಿ ನನ್ನನ್ನಾರಾಧಿಸುವಳು. ಆದೇ ಗೋದೆಯು ಮತ್ತೆ ವೈಶ್ಯಕುಲದಲ್ಲಿ ವಾಸವಿಯಾಗಿ ಅವತರಿಸಿ ತೇಜೋರೂಪಳಾಗಿ ನನ್ನನ್ನಾಶ್ರಯಿಸುವಳು. ನನ್ನಾಜ್ಞೆಯಂತೆ ನೀವು ಭೂಲೋಕಗಮನ ಮಾಡಿರಿ. ನಿಮಗೆ ಲಕ್ಷ್ಮೀಕಟಾಕ್ಷವಾಗುವದು' ಎಂಬದಾಗಿ ನುಡಿದನು.

ಭಗವದಾಜ್ಞೆಯನ್ನು ವೈಶ್ಯಮುನಿಗಳು ಶಿರಸಾವಹಿಸಿದರು. ಈಶ್ವರೋಕ್ತವಿಧಾನದಿಂದ ಗೋಕರ್ಣದ್ವಾರಾ ಪ್ರಯಾಣಮಾಡಲು ಸನ್ನದ್ಧರಾದರು. ಹೀಗೆ ಸಿದ್ಧರಾದ ಮುನಿಗಳನ್ನು ನೋಡಿ ಶಂಕರನು—'ನನ್ನ ವಾಕ್ಯದಲ್ಲಿ ನಿಮಗೆ ವಿಶ್ವಾಸ ಬರಲಿಲ್ಲ. ಸತ್ಯಲೋಕ ವೈಕುಂಠ ಲೋಕಗಳಿಗೆ ಹೋಗಿ ನೀವು ಆರ್ಜಿಸಿದುದೇನು? ನಾನು ನಿಮ್ಮ ಹಿತಾರ್ಥವಾಗಿ ಹೇಳಿದುದನ್ನು ಮೀರಿ ಬ್ರಹ್ಮನಾಗಲಿ ಮಹಾವಿಷ್ಣುವಾಗಲಿ ನಿಮಗೆ ಹೆಚ್ಚು ಭರವಸೆಯೇನು ಕೊಟ್ಟರು? ನೀವು ವಿಶ್ವಾಸಘಾತಕರಾದಿರಿ. ನನ್ನಲ್ಲುಂಟಾದ ಅವಜ್ಞೆಯಿಂದ ನೀವು ಪಾಪಪೂರಿತರಾಗಿರಿ' ಎಂದು ಶಪಿಸಿದನು.

ರುದ್ರಶಾಪದಿಂದ ವೈಶ್ಯರು ಪಾಪಸಮಾವಿಷ್ಟರಾದರು. ಬುದ್ಧಿ ಕುಶಲರೂ ತಪೋಧನರೂ ಆದುದರಿಂದ ತಮ್ಮನ್ನಾವರಿಸಿದ ಪಾಪ ವನ್ನು ವಸ್ತುಜಾತಿಯಲ್ಲಿಟ್ಟು ಭೂಲೋಕವನ್ನು ಪ್ರವೇಶಿಸಿದರು. ಭೂಮಿಯಲ್ಲಿ ತಮ್ಮ ವಾಸಯೋಗ್ಯವಾದ ಸ್ಥಳವನ್ನು ಹುಡುಕುತ್ತಾ, ನವಖಂಡೋತ್ತಮ ದೇಶದಲ್ಲಿ ಪಾನಾರವೆಂಬ ಹೆಸರಿನಿಂದ ಪ್ರಸಿದ್ಧ ವಾಗಿರುವ ಈಗಿನ ಆಂಧ್ರದೇಶದ ಗೋದಾವರೀ ಸಮುದ್ರಸಂಗಮ ಪ್ರಾಂತ್ಯದಲ್ಲಿ, ಪುಣ್ಯಸ್ಥಳವೂ ನಿರ್ಮಲವೂ ಆದ ಒಂದು ಸರೋ ವರದ ಬಳಿಯಲ್ಲಿ ಕ್ರೀಡಾರ್ಥವಾಗಿ ವಿರಮಿಸಿದರು. ಆ ದಿವ್ಯಸರೋ ವರದಲ್ಲಾದರೋ—ಕ್ರೌಂಚ - ಚಕ್ರವಾಕ ಹಂಸ ಮೊದಲಾದ ಜಲ ಪಕ್ಷಿಗಳು ವಿಚಿತ್ರವಾಗಿ ಆನಂದದಿಂದ ವಿಹರಿಸುತ್ತಿದ್ದವು. ಗಾಳಿಯ ಹೊಡೆತದಿಂದಾದ ಅಲೆಗಳಮೇಲೆ ಬೀಳುತ್ತಿರುವ ಸೂರ್ಯಕಿರಣ ಗಳಿಂದ ವಿವಿಧ ವರ್ಣಗಳುಂಟಾಗಿ ನೋಟಕರ ಕಣ್ಮನಗಳನ್ನಪಹರಿ ಸುತ್ತಿದ್ದವು. ಆಗ ತಾನೇ ಅರಳುತ್ತಿದ್ದ ಕಮಲಪುಷ್ಪಗಳ ಮಕ ರಂದವನ್ನು ಪಾನಮಾಡಲು ಮಧುಪಗಳು ಝೇಂಕರಿಸುತ್ತಿದ್ದವು. ಇಂದೀವರ ಕಲ್ಹಾರ ಅರವಿಂದ ಕೈರವ ಪುಷ್ಪಗಳಿಂದ ಸರೋವರವು ಶೋಭಾಯಮಾನವಾಗಿದ್ದಿತು. ತೀರದಲ್ಲಾದರೋ— ಪುಷ್ಪಗಳಿಂ ದಲೂ, ಫಲಗಳಿಂದಲೂ ಭರಿತಗಳಾದ ವೃಕ್ಷಗಳು ರಂಜಿಸುತ್ತಾ ಪ್ರಕೃತಿಸೌಂದರ್ಯವನ್ನು ಹೆಚ್ಚಿಸಿದ್ದವು. ಆ ಹೃದಯಾನಂದ ಜನಕವಾದ ಸರೋವರದ ಬಳಿಯಲ್ಲಿ ಓರ್ವಬ್ರಾಹ್ಮಣನು ತಪಶ್ಚರ್ಯ ದಲ್ಲಿದ್ದನು. ಆತನನ್ನು ನೋಡಿ ಮುನಿಗಳು, ವಿಪ್ರೋತ್ತಮ, ಇದು ಯಾವ ಪುಣ್ಯಕ್ಷೇತ್ರವೆಂದು ಪ್ರಶ್ನೆಮಾಡಿದರು. ವಿಪ್ರನು ಇದು ಪೌಲಸ್ತ್ಯಯಾಜ್ಞಿಕ ಕ್ಷೇತ್ರವೆಂದರುಹಿದನು. ವೈಶ್ಯಮುನಿಗಳು ಆ ವನದ ಶೋಭಾ, ಆ ಗೋದಾಸಾಗರ ಸಂಗಮ, ಅಲ್ಲಿನ ಶಾಂತತೆ, ಆ ಬ್ರಹ್ಮಮಾನಸ ಸರೋವರದಂತಿರುವ ಸರೋವರ ಸೌಂದರ್ಯ ಗಳಿಗೆ ಮನಸೋತು ಅಲ್ಲಿಯೇ ವಸತಿಮಾಡಬೇಕೆಂದು ನಿಶ್ಚಯಿಸಿ

ದರು ತಮಗೆ ಬೇಕಾದ ಪೂಜಾಸಾಧನಗಳನ್ನೂ ಭೋಜ್ಯವಸ್ತುಗಳನ್ನೂ ಸಂಗ್ರಹಿಸಿ ಆ ಸರೋವರದಲ್ಲಿ ಸ್ನಾನಮಾಡಿ ಭಗವದ್ಧ್ಯಾನಪರಾಯಣರಾದರು.

ಆ ಕಾಲಕ್ಕೆ ಸರಿಯಾಗಿ ಮುಕುಂದನ ಆಜ್ಞೆಯಿಂದ ವಿಶ್ವಕರ್ಮನು ವೈಶ್ಯಮುನಿಗಳು ತಪಸ್ಸುಮಾಡುತ್ತಿದ್ದ ವನಕ್ಕೆ ಬಂದನು. ಭಗವದುಕ್ತಿಯಂತೆ ವೈಶ್ಯರನ್ನು ಆದರದಿಂದ ಕಂಡು ಅವರ ವಾಸಕ್ಕೆ ಯೋಗ್ಯವಾಗುವ ಗೃಹಗಳನ್ನೂ, ಸೌಧಗಳನ್ನೂ, ದೇವಮಂದಿರಗಳನ್ನೂ, ಕ್ರೀಡಾಮಂಟಪಗಳಿಂದ ಸಹಿತವಾದ ದಿವ್ಯಾರಾಮಗಳನ್ನೂ, ವಾಪೀಕೂಪ ತಟಾಕಗಳನ್ನೂ, ಚತುರ್ದಿಕ್ಕುಗಳಲ್ಲೂ ಮಹಾದ್ವಾರಗಳಿಂದ ಸಹಿತವಾಗಿರುವಂತೆ ಕೋಟೆಕೊತ್ತಲಗಳನ್ನೂ, ಜಲಕ್ರೀಡಾರ್ಹ ಯಂತ್ರಗಳನ್ನೂ ನಿರ್ಮಿಸಿ, ಆ ಪಟ್ಟಣದ ಮಧ್ಯಭಾಗದಲ್ಲಿ ದಿವ್ಯಗೃಹಗಳಲ್ಲಿ ವೈಶ್ಯಮುನಿಗಳನ್ನು ಪ್ರತಿಷ್ಠಿಸಿದನು. ವೈಶ್ಯರ ಪಶ್ಚಿಮಭಾಗದಲ್ಲಿ ಬ್ರಾಹ್ಮಣರಿಗೂ ಪೂರ್ವಭಾಗದಲ್ಲಿ ಕ್ಷತ್ರಿಯರಿಗೂ ವಾಸಸ್ಥಳಗಳು ನಿರ್ಮಿತವಾದವು. ದಕ್ಷಿಣೋತ್ತರ ಪಾರ್ಶ್ವಗಳಲ್ಲಿ ಶೂದ್ರಜನರಿಗೆ ಗೃಹಗಳು ನಿರ್ಮಾಣವಾದವು. ಇದರಂತೆ ವಿವಿಧ ಶಿಲ್ಪಿಗಳ ವಾಸಕ್ಕೆ ತಕ್ಕ ವಸತಿಗಳು ಸಿದ್ಧವಾದವು. ಆ ದಿವ್ಯನಗರಿಯು ಸ್ಫಟಿಕದಂತೆ ಶುಭ್ರವಾದ ಶಿಖರಗಳಿಂದ ವಿರಾಜಿಸುತ್ತಿತ್ತು. ಆ ಮಹಾಪಟ್ಟಣವನ್ನು ಪ್ರದಕ್ಷಿಣೆಮಾಡಿದವರಿಗೆ ಭೂಪ್ರದಕ್ಷಿಣೆಮಾಡಿದ ಫಲವೆಂದು ವಿಧಿವಿಹಿತವಾಯಿತು. ನಗರದ ಸಮೀಪದಲ್ಲಿ ವೃದ್ಧಗಂಗೆಯು ಪ್ರವಹಿಸುತ್ತಿದ್ದಳು. ಸಮುದ್ರಸಂಗಮಸ್ಥಾನವು ಸಮೀಪದಲ್ಲಿದ್ದುದರಿಂದ ನಗರದ ಶೋಭೆಯು ಅವರ್ಣನೀಯವಾಗಿತ್ತು. ಕಾಲಕ್ರಮದಲ್ಲಿ ಷಟ್ಕರ್ಮನಿರತರೂ ಸಕಲವಿದ್ಯಾವಿಶಾರದರೂ ಆದ ಬ್ರಾಹ್ಮಣರು ಆ ದಿವ್ಯನಗರಿಯಲ್ಲಿ ನೆಲೆಸಿದರು. ಧರ್ಮನಿರತರೂ ದೇವಬ್ರಾಹ್ಮಣ ಪೂಜಕರೂ ಆದ

ಕ್ಷತ್ರಿಯರು ವೈಶ್ಯರಿಂದಾಹೂತರಾಗಿ ಅಲ್ಲಿ ನೆಲೆಸಿದರು. ಸ್ವಲ್ಪಕಾಲವೆನ್ನುವದರೊಳಗೆ ಸಕಲ ವರ್ಣಾಶ್ರಮದವರಿಂದಲೂ, ಸಕಲ ಕಲಾಕೋವಿದರಿಂದಲೂ, ನಗರವು ನಿಬಿಡೀಕೃತವಾಗಿ ಸ್ವರ್ಗಕ್ಕೆ ಸದೃಶವೆನಿಸಿತು.

ವೈಶ್ಯರ ಮುಖ್ಯಪಟ್ಟಣಕ್ಕೆ ಮಹಾದ್ರಿಪುರವೆಂಬ ನಾಮಕರಣವಾಯಿತು. ಇದನ್ನನುಸರಿಸಿ ಹದಿನೇಳು ಉಪನಗರಗಳು ನಿರ್ಮಿತವಾದವು. ತಮ್ಮದೇ ಪಟ್ಟಣಗಳು, ತಮ್ಮ ಆಧಿಪತ್ಯ, ಮೇಲಾದ ಭಗವದನುಗ್ರಹ, ಕೃಷಿವಾಣಿಜ್ಯ ಗೋಪಾಲನೆಗಳಿಂದಾರ್ಜಿಸಿದ ಸಕಲೈಶ್ವರ್ಯಗಳು, ತಮ್ಮನ್ನೇ ಅನುವರ್ತಿಸಿಕೊಂಡಿರುವ ಸಕಲ ಪ್ರಜೆಗಳು, ಎಲ್ಲಿ ನೋಡಿದರೂ ವೇದಘೋಷ ಪಾಠಪ್ರವಚನಗಳು, ಎಲ್ಲೆಲ್ಲೂ ಭಗವತ್ಪೂಜಾದಿಗಳು, ನರನಾರಿಯರ ಆನಂದಗಾನಗಳು, ಮಹಾಮುನಿಗಳ ಸಮಾಗಮ, ಅವರೊಡನೆ ಬ್ರಹ್ಮಜಿಜ್ಞಾಸಾ ಇಂತಹ ವೈಭವಗಳಿಂದ ಮಹಾದ್ರಿಪುರವು ಇಂದ್ರನ ಅಮರಾವತಿಯಾಯಿತು. ಬ್ರಾಹ್ಮಣ ಭಕ್ತರಾದ ವೈಶ್ಯರ ದಾನಧರ್ಮಗಳಿಂದ ಬ್ರಾಹ್ಮಣರ ತಪಶ್ಚರ್ಯ ಯಜ್ಞಾದಿಗಳು ನಿರಾತಂಕವಾಗಿ ನಡೆದವು. ತ್ರಿವರ್ಣಗಳ ಶುಶ್ರೂಷೆಯಿಂದಲೂ ಪುರಾಣ ಶ್ರವಣಾದಿಗಳಿಂದಲೂ ಶೂದ್ರರು ಸಂತುಷ್ಟರಾಗಿದ್ದರು. ಕಾಲಕಾಲಕ್ಕೆ ಮಳೆಯಾಗಿ ಸಕಲ ಧಾನ್ಯಗಳೂ ಬೆಳೆಯುತ್ತಿದ್ದವು. ಒಬ್ಬೊಬ್ಬನೂ ಗಜಾಂತ ಐಶ್ವರ್ಯವನ್ನನುಭವಿಸುತ್ತಿದ್ದನು.

ಶಾಲಂಕಾಯನನು ನಗರದ ವೈಭವವನ್ನು ಮತ್ತೂ ಹೀಗೆಂದು ವರ್ಣಿಸುತ್ತಾನೆ:—

ಆ ನಗರದಲ್ಲಿ ಸುಗತಿಚಂಚಲಗಳಾದ ದಿವ್ಯಾಶ್ವಗಳು ದಿವ್ಯರಥಗಳಿಂದ ಸಜ್ಜಿತವಾಗಿ ಸೂರ್ಯದೇವನ ಕುದುರೆಗಳಂತೆ ಉತ್ಕೃಷ್ಟವಾಗಿದ್ದವು. ವೀರಭಟರು ಶಸ್ತ್ರಪಾಣಿಗಳಾಗಿ ಸರ್ವದಾ ನಗರವನ್ನು

ರಕ್ಷಿಸುತ್ತಿದ್ದರು. ಅಷ್ಟೈಶ್ವರ್ಯಗಳಿಂದ ಪರಿಪೂರಿತವಾಗಿ ಲಕ್ಷ್ಮೀ ಲೀಲಾವಿರಾಜಿತವಾಗಿದ್ದುದರಿಂದ ನಗರಿಯು ಕ್ಷೀರಾಂಬುಧಿಗೆ ಸಮಾನ ವಾಗಿತ್ತು. ಸರ್ವಮಂಗಳೋಪೇತವಾಗಿದ್ದುದರಿಂದ ಗಿರೀಶನ ವಾಮಾಂಗದಂತೆ ಮಂಗಳಕರವಾಗಿತ್ತು. ನಾನಾಭೋಗಿ ಗಣಾ ವೃತವಾಗಿದ್ದುದರಿಂದ ರಸಾತಲದಂತೆ ವಿರಾಜಿಸುತ್ತಿತ್ತು. ಇಂದ್ರನ ಐರಾವತದಂತೆ ಚತುರ್ದಂತಯುಕ್ತಗಳಾದ ಗಜಗಳಿಂದ ಸ್ವರ್ಗ ಸದೃಶವಾಗಿತ್ತು. ಇಂಥಾ ಮಹಾದ್ರಿಗೆ ಕುಬೇರನು ಭಗವದಾಜ್ಞೆ ಯಿಂದ ತಾನೇಬಂದು ವೈಶ್ಯರಿಗೆ ಯುಗಭೇದವನುಸರಿಸಿ ವಣಿಗ್ಧರ್ಮ ವನ್ನೂ ದೇವಬ್ರಾಹ್ಮಣ ಅಭ್ಯಾಗತ ಪೂಜಾಕ್ರಮಗಳನ್ನೂ ಉಪ ದೇಶಿಸಿದನು.

ಹೀಗೆ ದಿನದಿನಕ್ಕೂ ಅಭಿವೃದ್ಧಿಹೊಂದಿದ ವೈಶ್ಯರು ಸಕಲ ದೇಶಗಳಲ್ಲೂ ವ್ಯಾಪಿಸಿದರು. ವೈಶ್ಯರ ಪ್ರಾಬಲ್ಯದ ಪರಮಾವಧಿಯ ಕಾಲವನ್ನು ಹೀಗೆಂದು ವರ್ಣಿಸಬಹುದು. ಕೃಷಿ ಗೋರಕ್ಷಣ ವಾಣಿಜ್ಯ ಈ ಮೂರು ವೃತ್ತಿಗಳೂ ವೈಶ್ಯರದಾಗಿದ್ದುದರಿಂದ ದೇಶದ ಎಲ್ಲ ಸಂಪತ್ತೂ ಅವರದಾಗಿತ್ತು. ಆ ಕಾಲದಲ್ಲಿ ಬ್ರಾಹ್ಮಣರಾಗಲಿ ಕ್ಷತ್ರಿಯರಾಗಲಿ ಶೂದ್ರರಾಗಲಿ ಭೂಮಿಯ ಒಡೆಯರಾಗಿರಲಿಲ್ಲ ಬ್ರಾಹ್ಮಣರು ನದೀತೀರಗಳಲ್ಲೂ ಅರಣ್ಯಗಳಲ್ಲೂ ಪರ್ಣಶಾಲೆಗಳನ್ನು ಕಟ್ಟಿಕೊಂಡು ಸ್ವಾಭಾವಿಕವಾಗಿ ಬೆಳೆದ ಕಂದಮೂಲ ಫಲಗಳನ್ನು ಆಹಾರಮಾಡಿಕೊಂಡು ತತ್ವಶೋಧನಾ ಕಾರ್ಯದಲ್ಲೂ ತಪಶ್ಚರ್ಯ ದಲ್ಲೂ ಆಸಕ್ತರಾಗಿದ್ದರು. ಕ್ಷತ್ರಿಯರೂ ವೈಶ್ಯರೂ ಅವರ ಗುರು ಕುಲಗಳಲ್ಲಿ ವಿದ್ಯಾಭ್ಯಾಸಮಾಡುತ್ತಾ ಅವರ ಯೋಗಕ್ಷೇಮವನ್ನು ನೋಡುತ್ತಿದ್ದರು. ಕ್ಷತ್ರಿಯರು ರಾಜರಾಗಿ ಶತ್ರುಗಳ ಬಾಧೆಯಿಲ್ಲ ದಂತೆ ದೇಶವನ್ನು ರಕ್ಷಿಸುತ್ತಿದ್ದರು. ವೈಶ್ಯರು ಕೊಡುವ ಕಪ್ಪ ಕಾಣಿಕೆಗಳಿಂದ ಕ್ಷತ್ರಿಯರ ಜೀವನವಾಗುತ್ತಿತ್ತು. ಶೂದ್ರರು ಮುಖ

ವಾಗಿ ವೈಶ್ಯರನ್ನವಲಂಬಿಸಿ ಪಶುಪಾಲನ ಕೃಷಿಕರ್ಮಗಳನ್ನು ನಿರ್ವಹಿಸಿ ರಾಜಪಾಲನ್ನು ವೈಶ್ಯರಿಗೆ ಕೊಟ್ಟು ಮಿಕ್ಕಭಾಗದಿಂದ ಜೀವಿಸುತ್ತಿದ್ದರು. ಆದುದರಿಂದ ದೇಶದ ಒಡೆತನವು ವೈಶ್ಯರದಾಗಿತ್ತು. ಸಕಲ ಸಂಪತ್ತೂ ಅವರದಾಗಿತ್ತು.

ಹೀಗೆ ಪ್ರಪಂಚ ವ್ಯವಹಾರ, ಪ್ರಾಪಂಚಿಕರೊಡನಾಟ ಪ್ರಾಪಂಚಿಕ ಭೋಗಾನುಭವಗಳಿಂದ ಕಾಲಕ್ರಮದಲ್ಲಿ ವೈಶ್ಯಸಂತಾನದವರು ಕೇವಲ ಪ್ರಾಪಂಚಿಕರಾಗಿಬಿಟ್ಟರು.

ಕಲಿಯುಗದಲ್ಲಿ ಪಾಂಡವ ಸಂತತಿಯು ನಷ್ಟವಾದಮೇಲೆ ಚಾರ್ವಾಕ ಬೌದ್ಧಮತಗಳು ತಲೆಯೆತ್ತಿ ವೇದಮತವು ಖಿಲವಾಯಿತು. ವಿಂಧ್ಯಪರ್ವತದ ದಕ್ಷಿಣಪ್ರಾಂತ್ಯದಲ್ಲಿ ವೇದಮತವೆಂಬ ಹೆಸರಿನಿಂದ ವಾಮಾಚಾರದ ತಾಂತ್ರಿಕಮತಗಳು ಹೆಚ್ಚಿದವು. ಬ್ರಾಹ್ಮಣ್ಯವು ಕಲಿಮಹಿಮೆಯಿಂದ ಬಹಳ ದುರ್ದೆಶೆಗೆ ಬಂದಿತು. ಬ್ರಾಹ್ಮಣರು ತಪಶ್ಚರ್ಯವನ್ನು ಬಿಟ್ಟು ಪಟ್ಟಣಗಳನ್ನು ಸೇರಿ ಸೇವಾವೃತ್ತಿಯಿಂದ ಜೀವಿಸಲಾರಂಭಿಸಿದರು. ಯುಗಾನುಸಾರವಾಗಿ ಜನರ ಭಾವನೆಗಳು ಬದಲಾದವು.

ಇಂಥಾ ಸಮಯದಲ್ಲಿ ತಾವು ಹಿಂದೆ ಕೊಟ್ಟ ವರವನ್ನು ಸಫಲಗೊಳಿಸುವ ನಿಮಿತ್ತವಾಗಿ ಮಹಾದ್ರಿಪುರದ ಬಹಿರಂಗಣದಲ್ಲಿ ಹರಿಹರರು ಪ್ರತಿಮಾಸ್ವರೂಪದಿಂದ ವೈಶ್ಯರಿಗೆ ದರ್ಶನವಿತ್ತರು. ಹಿಂದೆ ಎಂದೂ ಕಾಣಿಸದಿದ್ದ ಸುಂದರ ವಿಗ್ರಹಗಳು ದಿನದಿನಕ್ಕೂ ವಲ್ಮೀಕ ಪ್ರದೇಶದಿಂದ ತಲೆದೋರುತ್ತಿರುವದನ್ನು ನೋಡಿ ವೈಶ್ಯರು ಕರ್ತವ್ಯಮೂಢರಾಗಿ ಚಿಂತಾಪರರಾದರು. ಆ ರಾತ್ರಿ ವಾಸವನೆಂಬ ವೈಶ್ಯನ ಸ್ವಪ್ನದಲ್ಲಿ ಮಹಾವಿಷ್ಣುವು ಬ್ರಾಹ್ಮಣರೂಪದಿಂದ ದರ್ಶನಕೊಟ್ಟನು. -'ಅಯ್ಯಾ, ವೈಶ್ಯೋತ್ತಮ, ನಾಳೆ ಪ್ರಾತಃಕಾಲ ಒಬ್ಬಾನೊಬ್ಬ ಬ್ರಾಹ್ಮಣನು ಮಹಾದ್ರಿಗೆ ಬರುವನು. ಅವನು ಹೇಳುವ ವಿಧಾನ

ದಿಂದ ಹರಿಹರರ ಪ್ರತಿಷ್ಠೆಮಾಡಬೇಕು. ವಿಷ್ಣುವಿಗ್ರಹವನ್ನು ಜನಾರ್ದನನೆಂತಲೂ ಲಕ್ಷ್ಮಿಯನ್ನು ಕೋನಕಮಲಾ ಎಂತಲೂ ಕರೆದು ಸೇವಿಸಬೇಕು. ಈ ಪುರಾತನ ಮೂರ್ತಿಗಳನ್ನು ಮಾಂಡವ್ಯರೂ ಮಾರ್ಕಂಡೇಯರೂ ಸೇವಿಸುತ್ತಿದ್ದರು. ಕಾಲವೈಪರೀತ್ಯದಿಂದ ಸೇವಾಲೋಪವಾಗಿ ಮೂರ್ತಿಗಳು ಭೂಗತವಾಗಿದ್ದವು. ಈ ಮೂರ್ತಿಗಳನ್ನು ವೈಷ್ಣವಾಗಮರೀತ್ಯಾ ಪ್ರತಿಷ್ಠಿಸಿ ಬ್ರಾಹ್ಮಣರಿಂದ ಪೂಜಾ ಮಾಡಿಸಬೇಕು. ಇದರಂತೆ ಶಿವಶಿವೆಯರನ್ನು ನಗರೇಶ್ವರ ವಿಂಧ್ಯವಾಸಿನಿಯೆಂಬ ಹೆಸರಿನಿಂದ ಶೈವಾಗಮರೀತ್ಯಾ ಪ್ರತಿಷ್ಠಿಸಿ ಪೂಜಿಸಬೇಕು. ಇದು ನಿಮ್ಮ ಅಭ್ಯುದಯಕಾಲವು' ಎಂದು ಹೇಳಿ ಅದೃಶ್ಯನಾದನು.

ಪ್ರಾತಃಕಾಲದಲ್ಲಿ ವಾಸವನು ತನ್ನ ಸ್ವಪ್ನವೃತ್ತಾಂತವನ್ನು ವೈಶ್ಯರಿಗೆಲ್ಲಾ ತಿಳಿಸಿದನು. ಜನಮಂಡಲಿಯಲ್ಲಿ ಆಶ್ಚರ್ಯ ಆನಂದಗಳಿಗಾರಂಭವಾಯಿತು. ಆ ದಿನವೇ ಸ್ವಪ್ನಸೂಚನೆಗೆ ತಕ್ಕಂತೆ ಒಬ್ಬ ಬ್ರಾಹ್ಮಣನು ತನ್ನ ಶಿಷ್ಯಪರಿವಾರ ಸಹಿತನಾಗಿ ಗಂಗಾಸ್ನಾನಾರ್ಥ ಯಾತ್ರಿಕನಾಗಿ ಮಹಾದ್ರಿಪುರಕ್ಕೆ ಬಂದನು. ಅವರನ್ನು ಕಂಡು ವಾಸವನು ನೀವ್ಯಾರೆಂದು ಪ್ರಶ್ನೆಮಾಡಿದನು.

ಬ್ರಾಹ್ಮಣ—ವಣಿಕ್ಪ್ರವರ, ನಾವು ಅಹೋಬಲ ಕ್ಷೇತ್ರವಾಸಿಗಳು. ಆಗಮಜ್ಞರು. ವಿಷ್ಣುಭಕ್ತರು. ಗೌತಮೀತೀರದಲ್ಲಿರುವ ನೃಸಿಂಹಸ್ವಾಮಿಯನ್ನು ಸೇವಿಸಲು ಈ ಮಾರ್ಗವಾಗಿ ಬಂದೆವು.

ವಾಸವ—ನೀವು ದೇವತಾಪ್ರತಿಷ್ಠೆಮಾಡಬಲ್ಲಿರಾ ?

ಬ್ರಾಹ್ಮಣ—ಆಗಮಜ್ಞರಾಗಿರುವದರಿಂದ ನಮ್ಮ ಜನ್ಮದ ವ್ಯಾಪಾರವೇ ದೇವತಾಪ್ರತಿಷ್ಠಾಕಾರ್ಯವಾಗಿರುವದು.

ವಾಸವ—(ಬ್ರಾಹ್ಮಣನನ್ನು ವಲ್ಮೀಕದ ಬಳಿಗೆ ಕರೆದುಕೊಂಡು ಹೋಗಿ ವಿಗ್ರಹಗಳನ್ನು ತೋರಿಸಿ) ಸ್ವಾಮಿಾ, ಈ ವಿಗ್ರಹಗಳ ಪ್ರತಿಷ್ಠೆಯಾಗಬೇಕು. ತಾವು ಈ ಮಹಾ ಕಾರ್ಯವನ್ನು ನಡೆಸಿಕೊಡುವಿರಾದರೆ ಕೃತಜ್ಞನಾಗಿರುವೆನು.

ಬ್ರಾಹ್ಮಣ—ಆಗಬಹುದು. ಜನಾರ್ದನ ಕೋನಕಮಲಾದೇವಿಯರನ್ನು ವೈಖಾನಸಾಗಮರೀತ್ಯಾ ಪ್ರತಿಷ್ಠಿಸಬೇಕಾಗುವದು. ನಗರೇಶ್ವರ ವಿಂಧ್ಯವಾಸಿನಿಯರನ್ನು ವಾತೂಲಾಗಮರೀತ್ಯಾ ಪ್ರತಿಷ್ಠಿಸಬೇಕಾಗುವದು. ಈ ಕಾರ್ಯಕ್ಕೆ ತಜ್ಞರಾದ ವಿಪ್ರೋತ್ತಮರನ್ನು ಕರೆಸಬೇಕು.

ವಾಸವ—ಆಗಬಹುದು.

ಮಹಾಯಾತ್ರೆಗೆ ಹೊರಟಕಾಲಕ್ಕೆ ಸರಿಯಾಗಿ ದೇವತಾ ಪ್ರತಿಷ್ಠಾಕಾರ್ಯವೊದಗಿದುದರಿಂದ ಮಹಾ ಶುಭೋದಯವಾಯಿತೆಂದು ಬ್ರಾಹ್ಮಣನಿಗೆ ಸಂತೋಷವಾಯಿತು.

ವಾಸವನಿಗಾದರೋ—ಸ್ವಪ್ನಕ್ಕೆ ತಕ್ಕಂತೆ ಆಗಮಜ್ಞನಾದ ಬ್ರಾಹ್ಮಣನು ಬಂದುದರಿಂದ ಪರಮಾನಂದವಾಯಿತು. ಬ್ರಾಹ್ಮಣನ ಅನುಜ್ಞೆಯಾದಂತೆ ಹರಿಹರರ ಪ್ರತಿಷ್ಠೆಗೆ ತಕ್ಕ ಸಲಕರಣೆಗಳನ್ನೊದಗಿಸಿ ಆಗಮವೇತ್ತರಾದ ಋತ್ವಿಕ್ಕುಗಳನ್ನು ಬರಮಾಡಿದನು. ಶುಭದಿವಸ ಶುಭಮುಹೂರ್ತದಲ್ಲಿ ಎರಡೂ ದೇವಾಲಯಗಳ ಪ್ರತಿಷ್ಠೆಯಾಯಿತು. ಬ್ರಾಹ್ಮಣನು ಯಾತ್ರೋನ್ಮುಖನಾಗಿ ಹೊರಟನು. ಬ್ರಾಹ್ಮಣನ ವಿದ್ವತ್ತು, ಶಮದಮಾದಿ ಗುಣಗಳು, ತೇಜಸ್ಸು ಇವುಗಳಿಂದ ಸುಪ್ರೀತರಾದ ವೈಶ್ಯರು, ವಿನಯದಿಂದ - 'ಸ್ವಾಮಿಾ, ತಾವು ಮಹಾದ್ರಿಯಲ್ಲೇ ಇದ್ದು ದೇವತಾಸೇವೆಗಳನ್ನು ನಿರ್ವಿಘ್ನವಾಗಿ

ನೆರವೇರಿಸುತ್ತಾ ನಮಗೆ ಮಾರ್ಗದರ್ಶಿಗಳಾಗಿ ಕಾಪಾಡಬೇಕೆಂದು ಕೇಳಿಕೊಂಡರು.

ಬ್ರಾಹ್ಮಣನು ನಗುತ್ತಾ, ನಾವು ಬಂದದ್ದೇ ಅದಕ್ಕೆ! ಯಾತ್ರೆಯನ್ನು ಪೂರೈಸಿ ಮಹಾದ್ರಿಯಲ್ಲಿ ಬಂದಿರುವೆವೆಂದು ಅಭಯವಿತ್ತು ಅಂತರ್ವೇದೀಪುರಕ್ಕೆ ಪ್ರಯಾಣಮಾಡಿದನು.

**ಈತನೇ ಭಾಸ್ಕರಾಚಾರ್ಯನು. ಬ್ರಹ್ಮಾಂಶ ಸಂಭೂತನು ಮಹಾತಪೋಧನನು. ವೇದವೇದಾಂಗ ತತ್ವಜ್ಞನು. ಪ್ರಶಾಂತನು. ಶಾಪಾನುಗ್ರಹಸಕ್ತನು. ಶ್ರೀವತ್ಸಗೋತ್ರೋದ್ಭವನು. ಮಿತಭಾಷಿಯು.**

ಕಾಲಾಂತರದಲ್ಲಿ ಭಾಸ್ಕರಾಚಾರ್ಯನು ಮಹಾಯಾತ್ರೆಯನ್ನು ಪೂರೈಸಿ ಮಹಾದ್ರಿಗೆಬಂದು ವೈಶ್ಯರ ಕುಲಗುರುವಾದನು. ಆಚಾರ್ಯನ ಶಿಷ್ಯರಾದಮೇಲೆ ವೈಶ್ಯರು ತಮ್ಮ ಆಚಾರವಿಚಾರಗಳಲ್ಲಿದ್ದ ಲೋಪಗಳನ್ನು ಸರಿಪಡಿಸಿಕೊಂಡು ಮಹಾಭಗವದ್ಭಕ್ತರಾದರು. ಆಚಾರ್ಯನ ಪ್ರಭಾವದಿಂದ ತತ್ಕಾಲದಲ್ಲಿ ಪ್ರಚಾರವಾಗುತ್ತಿದ್ದ ವಾಮಾಚಾರದ ಬಾಯಿಗಾಗಲಿ, ಚಾರ್ವಾಕ ಬೌದ್ಧಮತಗಳ ಹಾವಳಿಯಿಂದುಂಟಾದ ನಾಸ್ತಿಕತೆಯೆಂಬ ಮಹಾಮಾರಿಗಾಗಲಿ ವೈಶ್ಯರು ತುತ್ತಾಗದೆ ತಮ್ಮ ವೈದಿಕತ್ವವನ್ನುಳಿಸಿಕೊಂಡರು.

ಅನಂತರ ವೈಶ್ಯಕುಲದಲ್ಲಿ ಶ್ರೀಭೂಸ್ವರೂಪಳಾದ ಮಹಾಲಕ್ಷ್ಮಿಯು ಕನ್ಯಕಾನಾಮದಿಂದ ವಾಸವನಾಮಕ ವೈಶ್ಯನಿಗೆ ಮಗಳಾಗಿ ಅವತರಿಸಿದಳು. ಕನ್ಯಕಾನಿಮಿತ್ತವಾಗಿ ವಿಧಿವಶದಿಂದ ೧೦೨ ಗೋತ್ರದ ವೈಶ್ಯದಂಪತಿಗಳು ಅಗ್ನಿಪ್ರವೇಶಮಾಡಿದರು. ಅಗ್ನಿಪ್ರವೇಶಮಾಡಿದವರ ವಂಶವು ಲೋಕದಲ್ಲಿ ಅಭಿವೃದ್ಧಿಯನ್ನು ಹೊಂದಿತು.

ಹೀಗೆ ಸಂಕ್ಷೇಪಕಥಾಶ್ರವಣಮಾಡಿದ ವೈಶ್ಯಮುನಿಗಳು ಶಾಲಂಕಾಯನ ಋಷಿಯನ್ನು ಕುರಿತು, -'ಓ ಮುನಿಶ್ರೇಷ್ಠ! ನೀನು ಹೇಳಿದ ಕಥೆಯು ವಿಚಿತ್ರವು, ಅದ್ಭುತವು; ನಮಗೋಸ್ಕರ ಈ ಕಥೆಯನ್ನು ವಿಸ್ತರಿಸಿ ಉಪದೇಶಿಸಬೇಕು. ವೈಶ್ಯರು ಇಂದ್ರೋಪಾಸನೆಯನ್ನು ಬಿಟ್ಟು ಹರಿಪರಾಯಣರಾದ ಬಗೆಹೇಗೆ? ವೈಶ್ಯಕನ್ಯಾರೂಪದಿಂದ ಲಕ್ಷ್ಮಿಯು ಅವತರಿಸಲು ಕಾರಣವೇನು? ವೈಶ್ಯದಂಪತಿಗಳು ಅಗ್ನಿಪ್ರವೇಶವೇಕೆ ಮಾಡಿದರು? ಈ ಸಂಶಯಗಳನ್ನು ಪರಿಹರಿಸಬೇಕು' ಎಂದು ಬೇಡಿಕೊಂಡು ನಮಸ್ಕಾರಮಾಡಿದರು' ಎಂಬ ಸ್ಥಳದಲ್ಲಿ ದ್ವಿತೀಯಾಧ್ಯಾಯವು ಮುಗಿದುದು.



# ಮೂರನೇ ಅಧ್ಯಾಯ

ಶಾಲಂಕಾಯನನು ವೈಶ್ಯರಾಚರಿಸುತ್ತಿದ್ದ ಇಂದ್ರ ಯಾಗವು ನಿಂತುಹೋದ ಬಗೆಯನ್ನು ವರ್ಣಿಸುತ್ತಾನೆ:—

—'ಕೇಳಿ ಮುನಿಗಳೆ, ಭಗವದಾಜ್ಞಾನುಸಾರ ಭೂಲೋಕಕ್ಕೆ ಪ್ರಾಪ್ತರಾದ ವೈಶ್ಯರು ಸಂತುಷ್ಟಾಂತಃಕರಣರಾಗಿ ಪ್ರತಿವರ್ಷ-ಪ್ರ ವಿಧಿವತ್ತಾಗಿ ಇಂದ್ರಯಾಗವನ್ನು ಕುಲೋಚಿತ ಧರ್ಮವೆಂದು ಆಚರಿಸುತ್ತಿದ್ದರು. ದ್ವಾಪರಯುಗದಲ್ಲಿ ವೈಶ್ಯಜಾತಿಯ ನಂದದಂಪತಿಗಳು ಮಾಡಿದ ತಪಸ್ಸಿಗೆ ಫಲವಾಗಿ ಶ್ರೀಕೃಷ್ಣನು ಅವರಿಗೆ ಪುತ್ರತ್ವೇನ ಪ್ರಾಪ್ತನಾದನು. ಪರಮಾತ್ಮನು ಯಾವ ಕುಲದಲ್ಲವತರಿಸುವನೋ ಆ ಕುಲಧರ್ಮವನ್ನು ಯುಗಾನುಸಾರ ವಯೋನುಸಾರ ತಾನು ಆಚರಿಸಿ ಲೋಕಶಿಕ್ಷೆಮಾಡುವದು ಅವನ ಪದ್ಧತಿ. ಭೂಲೋಕಗಮನಕಾಲದಲ್ಲಿ ದ್ವಾಪರಯುಗದಲ್ಲಿ ಇಂದ್ರನ ಮೂಲಕವಾಗಿ ಮಾಡುವ ಆರಾಧನೆಯನ್ನು ತಪ್ಪಿಸುವೆನೆಂದು ವೈಶ್ಯಮುನಿಗಳಿಗೆ ಕೊಟ್ಟ ಅಭಯವು ಫಲಿತವಾಗುವ ಕಾಲವೊದಗಿತು ಅಧಿಕಾರ ಮದ ಗರ್ವಿತನಾದ ಇಂದ್ರನ ಗರ್ವಭಂಗವಾಗುವ ಕಾಲವೂ ಸನ್ನಿಹಿತವಾಯಿತು. ಪದ್ಧತಿಗನುಸಾರವಾಗಿ ನಂದಾದಿಗಳು ಇಂದ್ರಯಾಗದ ಸಿದ್ಧತೆಯನ್ನುಮಾಡಿದರು. ಶ್ರೀಕೃಷ್ಣನು-'ಯಾರಿಗಾಗಿ ಈ ಯಾಗವನ್ನುಮಾಡುವಿರಿ ? ಇಂದ್ರನು ಸ್ವಲ್ಪತೇಜಸ್ಕನು, ಕೇವಲ ಸ್ವರ್ಗಾಧಿಪತಿಯು ; ಅಲ್ಪಫಲಪ್ರದನು ; ವೈಶ್ಯರಿಗೆ ಇಂದ್ರನು ದೇವರೆಂಬ ಶಾಸ್ತ್ರವಿದ್ದರೂ ಸರ್ವಶಾಸ್ತ್ರಪ್ರವರ್ತಕನಾದ ನಾನೇ ನಿಮಗೆ ಪ್ರಸನ್ನನಾಗಿರುವೆನು ; ಇಂದ್ರನು ವೃಷ್ಟಿದೇವತೆಯಾಗಿ

ದ್ದರೂ ಅವನಿಗೂ ದೇವನು ನಾನು; ನಾನು ಸರ್ವರಿಗೂ ಪ್ರಭುವು; ಸಕಲ ದೇವವಂದ್ಯನು; ನಿಮಗೆ ಬೇಕಾದುದನ್ನು ಕೊಡುವವನು ನಾನು; ನನಗೆ ಸಾಧ್ಯವಾಗದಿರುವದಿಲ್ಲ; ನಾನು ಪರಬ್ರಹ್ಮನು; ಈ ಯಾಗವನ್ನು ಕೃಷ್ಣಾರ್ಪಣ ಬುದ್ಧಿಯಿಂದ ಮಾಡಿರಿ' ಎಂದು ಆಜ್ಞೆಯಿತ್ತನು.

ಈ ಆಜ್ಞೆಯಿಂದ ವೈಶ್ಯರು ವಿಚಾರಪರರಾದರು. ಶ್ರೀಕೃಷ್ಣನು ಗೋಕುಲದಲ್ಲವತರಿಸಿದಾಗಿನಿಂದ—ವದನದಲ್ಲಿ ಬ್ರಹ್ಮಾಂಡವನ್ನು ತೋರಿಸಿದುದು, ದುಷ್ಟದಾನವರನ್ನು ಸಂಹರಿಸಿದುದು, ದಾವಾಗ್ನಿಯನ್ನು ಪಾನಮಾಡಿದುದು ಇವೇ ಮೊದಲಾದ ಅತಿಮಾನುಷಮಹಿಮೆಗಳೊಂದೊಂದನ್ನೂ ನೆನೆನೆನೆದು, ನಾರದಾದಿ ಮುನಿಗಳ ವಾಕ್ಯದಿಂದ ಶ್ರೀಕೃಷ್ಣನೇ ಭೂಭಾರಪರಿಹಾರಾರ್ಥವಾಗಿ ಅವತರಿಸಿದ ನಾರಾಯಣನೆಂದು ನಿಶ್ಚಯಿಸಿದರು. ಇಂದ್ರಾರ್ಪಿತವಾಗಿ ಮಾಡುವ ಯಜ್ಞವನ್ನು ಕೃಷ್ಣಾರ್ಪಣಬುದ್ಧಿಯಿಂದ ನೆರವೇರಿಸಿದರು. ಇದರಿಂದ ಇಂದ್ರನು ಕುಪಿತನಾದನು. ಗೋಕುಲವನ್ನು ನಾಶಪಡಿಸಿಬಿಡುವೆನೆಂದು ಏಳುದಿವಸ ಪರ್ವತಗಳನ್ನೇ ಮಳೆಗರೆಯುತ್ತಿರುವನೋ ಎಂಬಂತೆ ಘೋರವಾದ ಮಳೆಗರೆದನು. ಗೋಪರು ತಮ್ಮ ಮನೆಮಾರುಗಳೂ ಗೋಷ್ಠವೂ ಗೋವುಗಳೂ ಕರುಗಳೂ ತಮ್ಮ ಸರ್ವಸ್ವವೂ ನಾಶವಾಗುವ ಕಾಲಬಂತೆಂದು ಭೀತರಾಗಿ ಶ್ರೀಕೃಷ್ಣನ ಮೊರೆಹೊಕ್ಕರು -'ದೇವ! ನಿನ್ನ ಮಾತಿನಂತೆ ನಾವು ಇಂದ್ರಾವಜ್ಞೆಯನ್ನು ಮಾಡಿದುದಾಯಿತು. ಇಂದ್ರನು ಕುಪಿತನಾಗಿ ಕ್ರೂರವೃಷ್ಟಿಯಿಂದ ಗೋಕುಲವನ್ನು ನಾಶಪಡಿಸುತ್ತಿರುವನು. ಈಗ ನಮ್ಮ ಗತಿಯೇನು? ನಮ್ಮ ತನುಮನ ಧನಗಳನ್ನು ನಿನ್ನ ಪಾದಕ್ಕೊಪ್ಪಿಸಿರುವೆವು ನೀನೇ ನಮ್ಮನ್ನು ಕಾಪಾಡಬೇಕು' ಎಂಬದಾಗಿ ಪ್ರಾರ್ಥಿಸಿದರು.

ಕೃಪಾಳುವಾದ ಶ್ರೀಕೃಷ್ಣನು ಗೋವರ್ಧನ ಪರ್ವತವನ್ನೆತ್ತಿ ಹಿಡಿದು ಗೋಕುಲಕ್ಕೆ ಬಂದ ವಿಪತ್ತನ್ನು ಪರಿಹರಿಸಿದನು. ಈ ಸಂಗತಿಯನ್ನು ತಿಳಿದು ಇಂದ್ರನು ತಾನು ಮಾಡಿದ್ದು ಭಗವದಪಚಾರವಾಯಿತೆಂದು ಸಕಲ ದೇವತೆಗಳಿಂದ ಸಹಿತನಾಗಿ ಶ್ರೀಕೃಷ್ಣನಿಗೆ ಶರಣಾಗತನಾದನು. ದಯಾಘನನಾದ ಶ್ರೀಹರಿಯು ಇಂದ್ರನನ್ನು ಕ್ಷಮಿಸಿದನು. ಇಂದ್ರಾದಿದೇವತೆಗಳು ಶ್ರೀಕೃಷ್ಣನಿಗೆ ಶರಣಾಗತರಾದುದನ್ನು ನೋಡಿ ಗೋಪಗೋಪಿಯರ ಭಕ್ತಿಯು ಹೆಚ್ಚಿತು. ಶ್ರೀಕೃಷ್ಣನೇ ಪರದೈವವೆಂದು ಅವನ ಮಹಿಮೆಯನ್ನು ಕೊಂಡಾಡಿದರು. ಈ ಕಾಲದಿಂದ ವೈಶ್ಯರು ಮಾಡುತ್ತಿದ್ದ ಇಂದ್ರಯಾಗವು ನಿಂತುಹೋಯಿತು.

ಕೃಷ್ಣಾವತಾರದೊಡನೆ ದ್ವಾಪರಯುಗವು ಪೂರ್ಣವಾಯಿತು. ಕಲಿಯುಗವು ಪ್ರಾರಂಭವಾಯಿತು. ಮಹಾದ್ರಿಪುರದಲ್ಲಿ ವೈಶ್ಯಕುಲದಲ್ಲಿ ವನಮಾಲಾಂಶ ಸಹಿತನಾದ **ವಾಸವ**ನೆಂಬ ಮಹಾಭಕ್ತನವತರಿಸಿದನು. ಧನವಂತನೂ ಗುಣವಂತನೂ ಆದಿವನು ವೈಶ್ಯಕುಲವೆಂಬ ಕ್ಷೀರಾಬ್ಧಿಗೆ ಚಂದ್ರನಂತೆ ರಾರಾಜಿಸಿದನು. ಧರ್ಮಶೀಲಳೂ ಪತಿವ್ರತೆಯೂ ಆದ **ಕಾವೇರಿ**ಯೆಂಬ ನಾರೀಮಣಿಯು ಈತನ ಪತ್ನಿಯಾದಳು. ವಾಸವನು ಕೃಷಿವಾಣಿಜ್ಯಗೋರಕ್ಷಣೆಗಳೆಂಬ ವಿಹಿತವೃತ್ತಿಗಳಿಂದ ಬಹಳ ಧನಾರ್ಜನೆಮಾಡಿದನು. ಎಷ್ಟೇ ಧನಿಕನಾದರೂ ವಾಸವನು ಮದಗರ್ವಿತನಾಗಲಿಲ್ಲ ದುರ್ಭೋಗದ ದುರಾಸಕ್ತಿ ಇವನಿಗೆ ಬರಲಿಲ್ಲ. ಅಧ್ಯಯನಾದಿಗಳಿಂದ ಋಷಿಋಣವನ್ನೂ, ಯಜ್ಞಯಾಗಾದಿಗಳಿಂದ ದೇವಋಣವನ್ನೂ ಪರಿಹರಿಸಿ ಧನ್ಯನೆನಿಸಿದನು. ದೇವಾಲಯಗಳನ್ನೂ ತಟಾಕಗಳನ್ನೂ ಅಗ್ರಹಾರಗಳನ್ನೂ ಕಟ್ಟಿಸಿ ಧರ್ಮಾತ್ಮನಾದನು. ಸತ್ಸಂತಾನದಿಂದ ಪಿತೃಋಣವನ್ನು ತೀರಿಸುವ ಭಾಗ್ಯವಿನ್ನೂ ಈತನಿಗಾಗಲಿಲ್ಲ. ಈ ಕಾರಣ ವಾಸವನು

ದುಃಖಿತನಾದನು. ಅಪುತ್ರನಾದ ನನ್ನ ಹೆಸರನ್ನು ಹೇಳುವರ್‍ಯಾರು? ಮೃತನಾದರೆ ನನಗೆ ಪಿಂಡೋದಕ ಕ್ರಿಯೆಗಳನ್ನು ಮಾಡಿ ಸದ್ಗತಿ ಯಿಾವರಾರು? ಇಷ್ಟು ಗೃಹಕ್ಷೇತ್ರ ಆರಾಮಾದಿಗಳನ್ನು ಯಾರಿ ಗೊಪ್ಪಿಸಲಿ? ಜನ್ಮಾಂತರಗಳಲ್ಲಿ ನಾನೇನು ಪಾಪಮಾಡಿದೆ? ಎಂಬ ದಾಗಿ ಚಿಂತಿಸುತ್ತಾ, ತನ್ನ ಸರ್ವಸ್ವವನ್ನೂ ಧರ್ಮಕಾರ್ಯಗಳಿಗೆ ವಿನಿಯೋಗಿಸಿ, ಜನಾರ್ದನ ಕೋನಕಮಲಾದೇವಿಯರ ಸೇವೆಯಲ್ಲಿ ತನ್ನ ಜೀವಿತಕಾಲವನ್ನು ಕಳೆದನು. ಭಾಸ್ಕರಾಚಾರ್ಯರಿಂದ ಉಪ ದೇಶಹೊಂದಿ ಮಂತ್ರೋಪಾಸಕನಾದನು. ದಿವ್ಯ ಪುಷ್ಪೋದ್ಯಾನ ವನ್ನು ನಿರ್ಮಿಸಿ ತಾನೇ ಜಲಸೇಚನೆಮಾಡುತ್ತಾ, ತುಲಸೀಪುಷ್ಪ ಮಿಶ್ರಿತಮಾಲಿಕೆಗಳನ್ನು ರಚಿಸಿ ಶ್ರೀಜನಾರ್ದನನಿಗೆ ಸಮರ್ಪಿಸುತ್ತಾ, ದೇವರ ಸನ್ನಿಧಿಯಲ್ಲಿ ದೀಪಸೇವಾ ವ್ಯಜನಸೇವಾದಿಗಳನ್ನು ಮಾಡುತ್ತಾ, ಅಲ್ಲಿ ದೊರೆತ ಪ್ರಸಾದದಿಂದ ದೇಹಧಾರಣೆಮಾಡಿ ಕೊಂಡು ಸರ್ವದಾ ಪತ್ನೀಸಮೇತನಾಗಿ ಕಮಲಾದೇವಿಯ ದೇವಾ ಲಯದಲ್ಲಿ ಕಾಲಯಾಪನೆಮಾಡಿದನು. ಕಾಲಕ್ರಮದಲ್ಲಿ ವಾಸವಶೆಟ್ಟಿ ಯೆಂಬ ಹೆಸರು ಸಹ ಜನರಿಗೆ ಮರೆತುಹೋಯಿತು. ಸುಮಮಾಲಿಕೆ ಗಳನ್ನು ಪರಮಾತ್ಮನಿಗೆ ಸಮರ್ಪಿಸುತ್ತಿದ್ದಕಾರಣ ಈತನನ್ನು **ಕುಸುಮಶೆಟ್ಟಿ**ಯೆಂದು ಜನರು ಕರೆದರು. ಈತನ ಪತ್ನಿಯಾದ ಕಾವೇರಿಯನ್ನೂ ಸದಾ ಪುಷ್ಪೋದ್ಯಾನದಲ್ಲಿದ್ದು ಮಾಲಾಕಾರಿಣಿ ಯಾಗಿದ್ದುದರಿಂದ **ಸುಮಾಂಬೆ**ಯೆಂದು ಕರೆದರು.

ಈ ರೀತಿ ಬಹುಕಾಲ ಕಳೆಯಿತು. ಭಗವತ್ಸೇವೆಯಿಂದ ಕುಸುಮದಂಪತಿಗಳ ದೇಹೇಂದ್ರಿಯಗಳು ಪಾವನವಾದವು. ಸರ್ವದಾ ಹರಿಭಜನೆಯಿಂದಿವರ ಚಿತ್ತಶುದ್ಧಿಯಾಯಿತು. ಆಡಿದರೆ ಹರಿನಾಮ, ಮಾಡಿದರೆ ಹರಿಸೇವೆ, ನೋಡಿದರೆ ಹರಿಮೂರ್ತಿಯೆಂಬ ಅನುಭವವು ಈ ದಂಪತಿಗಳಿಗೆ ಅವಸ್ಥಾತ್ರಯದಲ್ಲೂ ಉಂಟಾಯಿತು. ಸಂತತ್ಯ

ಭಾವಚಿಂತೆಯೊಂದು ಏನುಮಾಡಿದರೂ ದಂಪತಿಗಳ ಮನಸ್ಸಿನಿಂದ ದೂರವಾಗಲಿಲ್ಲ.

ಒಂದುರಾತ್ರಿ ಕುಸುಮಶೆಟ್ಟಿಯು ಸ್ವಪ್ನದಲ್ಲಿ ಶ್ರೀಹರಿಯ ದರ್ಶನ ವಾಯಿತು. ವ್ರತಸ್ನಾತನಾದ ವಾಮನನೋ ಎಂಬಂತೆ ವಟುವು ವಿರಾಜಿಸಿದನು. ನೀಲಮೇಘಶ್ಯಾಮನೂ ದ್ವಾದಶೋರ್ಧ್ವಪುಂಡ್ರ ಧರನೂ ಆದ ಸ್ವಾಮಿಯು ಪ್ರಸನ್ನಮುದ್ರೆಯಿಂದ ಕುಸುಮನನ್ನು ಕುರಿತು—'ವಣಿಕ್ಶ್ರೇಷ್ಠ ವರ, ನಿನ್ನ ಮನಸ್ಸಿನಲ್ಲಿರುವ ಚಿಂತೆಯೇನು? ಚಿಂತೆಯೆಂಬುವದು ಸಂತಾಪವ ಊಲ. ನೀನಾದರೋ ಪ್ರಪನ್ನನಾಗಿ ರುವೆ. ಪ್ರಪನ್ನನಿಗೆ ಚಿಂತೆಯಿರಬಾರದು. ನಿನಗೇನು ವರ ಬೇಕು ಕೇಳು. ನೀನು ಕೇಳಿದುದನ್ನು ಕೊಡಬೇಕೆಂದು ದರ್ಶನವಿತ್ತಿರು ವೆನು' ಎಂಬದಾಗಿ ನುಡಿದನು. ಆ ಮಾತಿಗೆ ಕುಸುಮನು,—'ದೇವ! 'ದಾರಾನ್ಸುತಾನ್ಪ್ರಿಯಾನ್ಪ್ರಾಣಾನ್ ಪರಸ್ಮೈ ಸನ್ನಿವೇದಯೇತ್' ಎಂಬ ಶಾಸ್ತ್ರವಚನದಂತೆ ಸುತರನ್ನು ಬಿಟ್ಟು ಮಿಕ್ಕ ಎಲ್ಲಾ ಸರ್ವ ಸಮರ್ಪಣ ಭಕ್ತಿಯನ್ನೂ ಮಾಡಿದೆನು. ಅದೊಂದು ಸೇವೆಯನ್ನೂ ಮಾಡಿ ಕೃತಾರ್ಥನಾಗಬೇಕೆಂಬ ಕುತೂಹಲವು ನನ್ನನ್ನು ಎಡೆಬಿಡದೆ ಬಾಧಿಸುತ್ತಿರುವದು. ಅನಪತ್ಯನಾದವನು ಆ ಸೇವೆಯನ್ನು ಮಾಡುವ ಬಗೆಹೇಗೆ? ಅದೊಂದನ್ನು ಕರುಣಿಸಿ ನಿನ್ನ ದಾಸನನ್ನುದ್ಧರಿಸ ಬೇಕು' ಎಂದು ಪ್ರಾರ್ಥಿಸಿದನು.

ವಟುವು ಕುಸುಮಶೆಟ್ಟಿಯನ್ನು ಕುರಿತು,—'ಅಯ್ಯಾ ನಿನಗೆ ಸಂತಾನವಾಗುವದು. ಪುತ್ರನಾಗಬೇಕೋ ಪುತ್ರಿಯಾಗಬೇಕೋ ಹೇಳು, ಎಂದನು. ಕುಸುಮನು—'ಪುತ್ರಿಯಿಂದೇನು ಫಲಸ್ವಾಮಿ, ವಂಶೋದ್ಧಾರಕನಾದ ಪುತ್ರನಾಗಬೇಕು' ಎಂದನು. ವಟುವು,— 'ವೈಶ್ಯೋತ್ತಮ! ಪುತ್ರನು ತ್ರಿಜನ (ಪಿತೃಪಿತಾಮಹ ಪ್ರಪಿತಾಮಹ) ಸಾಧಕನು. ಪುತ್ರಿಯು ಏಕವಿಂಶತಿ ಕುಲೋದ್ಧಾರಕಳು. ವೇದಾಧ್ಯ

ಯನ ಸಂಪನ್ನನಾದ ವಟುವಿಗೆ ಕನ್ಯಾದಾನವಮಾಡುವದು ಮಹಾಫಲದಾಯಕ' ಎಂದನು. ಕುಸುಮನು,—'ಆಹುದು, ಯೋಗ್ಯನಾದ ವರನು ದೊರೆಯದಿದ್ದರೆ ಕನ್ಯಾಪಿತೃತ್ವವು ಬಲು ಕಷ್ಟವಾಗುವದು; ನರಕಪ್ರಾಯವಾಗುವದು' ಎಂಬದಾಗಿ ನುಡಿದನು. ವಟುವು,—'ನಿನಗೆ ವರನಯೋಚನೆ ಬೇಡ; ನಾನು ಅಧೀತವಿದ್ಯನಾಗಿರುವೆನು; ಕನ್ಯಾರ್ಥಿಯಾಗಿರುವೆನು. ಕುಮಾರನೂ ಭೋಗಾರ್ಥಿಯೂ ವಾಮನನೂ ಆಗಿರುವ ನಾನು ನಿಷೇಧಾರ್ಹನಲ್ಲ. ನಿನ್ನ ಮಗಳನ್ನು ನನಗೇಕೊಟ್ಟು ವಿವಾಹವಮಾಡು. ನನ್ನ ಮಾತಿಗೆ ಪ್ರತಿಹೇಳಬೇಡ' ಎಂದನು. ಈ ಮಾತಿಗೆ ಕುಸುಮನು,—'ದೇವ! ನೀನು ಪರಿಗ್ರಹಿಸುವ ಕನ್ನಿಕೆಯಾದರೆ ನಾನೇ ಧನ್ಯನು. ಕನ್ನಿಕೆಯೂ ಧನ್ಯಳು. ನನ್ನ ಕುಲಕೋಟಿಯು ಪಾವನವಾಗುವದು' ಎಂದನು. 'ವಟುವು ಹಾಗಿದ್ದರೆ ನಿನಗೆ ಓರ್ವಕುಮಾರಿಯು ಜನಿಸುವಳು' ಎಂದು ವರವಿತ್ತನು. ಕುಸುಮನು—'ಮಹಾಪ್ರಸಾದ'ವೆಂದನು.

ಇದೇ ಸಮಯದಲ್ಲಿ ಕುಸುಮಾಂಬೆಯೂ ದಿವ್ಯ ಸ್ವಪ್ನವನ್ನು ಕಂಡಳು. ಆ ಶುಭದಿವಸವು ಆಶ್ವೀಜ ಶುಕ್ಲಪಕ್ಷದ ಶುಕ್ರವಾರವಾಗಿದ್ದಿತು. ಆವತ್ತು ಕುಸುಮಾಂಬೆಯು ಎಂದಿಗಿಂತ ವಿಶೇಷವಾಗಿ ಪುಷ್ಪಮಾಲಿಕೆಗಳನ್ನು ಕಟ್ಟಿ ದೇವಿಗೆ ಸಮರ್ಪಿಸಿದ್ದಳು. ಶುಕ್ರವಾರದ ಪೂಜೆಯಾಗಿದ್ದುದರಿಂದ ದೇವಿಯ ದಿವ್ಯಾಲಂಕಾರವು ಸುಮೆಯ ಮನಸ್ಸಿನಲ್ಲಿ ಚನ್ನಾಗಿ ನಿಂತಿತ್ತು. ದಿವ್ಯ ವಸ್ತ್ರಾಭರಣಗಳಿಂದಲಂಕೃತಳಾದ ಲಕ್ಷ್ಮಿಯು ಸುಮೆಯು ಸಮರ್ಪಿಸಿದ ಮಾಲೆಗಳಿಂದ ಶೋಭಿತಳಾಗಿ ಸುವರ್ಣವರ್ಣಳಾಗಿ ಸ್ವಪ್ನದಲ್ಲಿ ದರ್ಶನ ಕೊಟ್ಟಳು. ಸ್ವಪ್ನದಲ್ಲಾದ ದೇವಿಯ ದರ್ಶನದಿಂದ ಸುಮೆಗೆ ಪರಮಾನಂದವಾಯಿತು. ಆಗಲೂ ಸುಮೆಯು ದೇವಿಯನ್ನು ಸ್ತೋತ್ರಮಾಡಿದಳು. ದೇವಿಯು ಮಂದಹಾಸದಿಂದಲೂ ಕರುಣಾದೃಷ್ಟಿಯಿಂದಲೂ ಸುಮೆಯನ್ನು ಕುರಿತು :—

ದೇವಿ—ಸುಮೆ! ನಿನಗೆ ಸಂತತಿಯನ್ನು ಕೊಡಬೇಕೆಂದಿದು ವೆನು. ಮಗ ಬೇಕೋ ಮಗಳು ಬೇಕೋ ಹೇಳು.

ಸುಮೆ—ತಾಯಿಾ ನನಗೆ ಮಗಳಾದರೆ ಸಾಕು.

ದೇವಿ—ಮಗಳನ್ನು ಯಾರಿಗೆ ಕೊಡುವೆ?

ಸುಮೆ—ಅಂಥಾ ಕಾಲ ಬರಲಿ ನೋಡೋಣ!

ದೇವಿ—ಇಲ್ಲ ಇಲ್ಲ! ನಿನ್ನ ಮಗಳನ್ನು ನನ್ನ ಗಂಡನಿಗೆ ಕೊಡ ಬೇಕು. ಕೊಡುವೆಯೊ?

ಸುಮೆ—(ಪ್ರತ್ಯುತ್ತರ ಕೊಡಲು ತೋರದೆ ದೇವಿಯನ್ನೇ ನೋಡುತ್ತಾ) ಏನು?

ದೇವಿ—ನೋಡು ಸುಮೆ! ನಾನು ವೃದ್ಧಳಾದೆನು. ನನ್ನ ಗಂಡನು ಮತ್ತೊಬ್ಬಳನ್ನು ಮದುವೆಮಾಡಿಕೊಳ್ಳ ಬೇಕೆಂದಿರುವನು. ನಿನ್ನ ಮಗಳನ್ನು ನನ್ನ ಗಂಡ ನಿಗೇ ಮದುವೆಮಾಡಿಕೊಡುವೆಯಾದರೆ ನಿನಗೆ ಸಂ ತಾನವನ್ನು ಕೊಡುವೆನು.

ಸುಮೆ—ಆಗಬಹುದು ತಾಯಿಾ.

ಕುಸುಮಾಂಬೆಗೆ ಎಚ್ಚರವಾಯಿತು. ಸ್ವಪ್ನವೃತ್ತಾಂತವನ್ನು ಸ್ಮರಿಸಿಕೊಂಡು ಆಶ್ಚರ್ಯಭರಿತಳಾದಳು. ಸ್ವಪ್ನದಲ್ಲಿ ದರ್ಶನ ಕೊಟ್ಟವಳು ಸಾಕ್ಷಾಲ್ಲಕ್ಷ್ಮಿಯೆಂದು ಭಾವಿಸಿದಳು. ಸಂತೋಷವು ಉಕ್ಕಿಬರುತ್ತಿರಲು ಪತಿಯನ್ನು ಸಂಬೋಧಿಸಿ, ತನ್ನ ಸ್ವಪ್ನವೃತ್ತಾಂತ ವನ್ನು ತಿಳಿಸಿದಳು. ಸುಮಗುಪ್ತನೂ ತನ್ನ ಸ್ವಪ್ನದಲ್ಲಿ ವಟುವಾಗಿ ಬಂದು ಯಾಚಿಸಿದವನು ಸಾಕ್ಷಾದ್ವಾಮನಮೂರ್ತಿಯೆಂದು ನಿಶ್ಚ ಯಿಸಿದನು. ಉಭಯರೂ ತಮ್ಮ ಸ್ವಪ್ನವಾರ್ತೆಯನ್ನು ಮಾತಾಡಿ ಕೊಳ್ಳುತ್ತಾ, ದೇವದೇವಿಯರ ಕಾರುಣ್ಯವನ್ನು ಕೊಂಡಾಡುತ್ತಾ,

ತಮಗೆ ಮಗಳಾದರೆ ಅವಳನ್ನು ಜನಾರ್ದನಸ್ವಾಮಿಗೆ ಕೊಟ್ಟು ಲಗ್ನ ಮಾಡುವೆವೆಂದು ನಿರ್ಧರಿಸಿದರು.

ವೃದ್ಧದಂಪತಿಗಳ ಸ್ವಪ್ನವಾರ್ತೆಯು ಜನಜನಿತವಾಯಿತು. ಈ ವಯಸ್ಸಿನಲ್ಲೂ ಮುದುಕರಿಗೆ ಮಕ್ಕಳ ಹಂಬಲು ಬಿಡಲಿಲ್ಲವೆಂದು ಜನರಾಡಿಕೊಂಡರು.

## ಕನ್ಯಕಾವತಾರ ಘಟ್ಟ

ಅನಂತರ ಕೆಲಕಾಲವೆನ್ನುವದರಲ್ಲಿ ಕುಸುಮಾಂಬೆಯು ಗರ್ಭಿಣಿಯಾದಳು. ದಿನೇದಿನೇ ಗರ್ಭಚಿಹ್ನೆಗಳನ್ನು ನೋಡಿ ಬಂಧು ಜನರು ಆನಂದಭರಿತರಾದರು. ನವಮಾಸ ತುಂಬಲು ವೈಶಾಖ ಶುದ್ಧ ದಶಮೀ ಶುಕ್ರವಾರ ಸಂಧ್ಯಾಕಾಲದಲ್ಲಿ, ಪುಷ್ಪೋದ್ಯಾನದಲ್ಲಿ, ಶ್ರೀತುಲಸೀವನದ ಬಳಿಯಲ್ಲಿ, ಕುಸುಮಾಂಬೆಯು ಸರ್ವಲಕ್ಷಣ ಸಂಪನ್ನಳೂ ಕಾಂತಿಯುತಳೂ ಆದ ಪುತ್ರಿಯನ್ನು ಪ್ರಸವಿಸಿದಳು. ವೃದ್ಧದಂಪತಿಗಳ ಆನಂದವು ಅಪರಿಮಿತವಾಯಿತು. ವಾಸವನು ಮಗಳಿಗೆ ಜಾತಕರ್ಮವನ್ನೆಸಗಿ **'ಕನ್ಯಕಾ, ವಾಸವಿ'** ಎಂಬ ನಾಮಕರಣಮಾಡಿದನು. ವಾಸವಿಯು ಶುಕ್ಲಪಕ್ಷದ ಚಂದ್ರಮನಂತೆ ದಿನೇದಿನೇ ಅಭಿವೃದ್ಧಳಾದಳು.

[ಈ ವಿಷಯದಲ್ಲಿ ಪಠನೀಯವಾದವುಗಳೆಂದು ಪ್ರಮಾಣಶ್ಲೋಕಗಳನ್ನುದ ಹರಿಸಲಾಗಿದೆ.]

ಶ್ಲೋ॥ ಸಂಪೂರ್ಣನವಮಾಸಾತ್ತುಪ್ರಸೂತವರಪುತ್ರಿಕಾಂ
ದೃಷ್ಟ್ವಾತಾಂಸುಕುಮಾರಾಂಗೀಂ ಸರ್ವಲಕ್ಷಣಸಂಯುತಾಂ
ಸ್ವರೋಚಿಭಿಃಪ್ರದೀಪ್ತಾಂಚಮೋದತುಃಪಿತರೌಭೃಶಂ
ತತಸ್ಸಕುಸುಮಾಯೋರ್ಸೌ ದೇಶೀಮಾರ್ಗಾನುಸಾರತಃ
ಬ್ರಾಹ್ಮಣೈರಭ್ಯನುಜ್ಞಾತೋಜಾತಕರ್ಮಾಕರೋತ್ತದಾ
ವೇದೋಕ್ತಕರ್ಮಣಾಚಾರ್ಯೋತಸ್ಯಾಃಪುತ್ರ್ಯಾಃಮನೋಹರಂ
ಕನ್ಯಕಾವಾಸವೀಚೇತಿನಾಮದ್ವಯಮಕಾರಯುತ್

ಕನ್ನಿಕೆಗೆ ವಿವಾಹವಯಸ್ಸು ಪ್ರಾಪ್ತವಾಯಿತು. ಬಾಲ್ಯ ಪ್ರಭೃತಿ ಶ್ರೀಹರಿನಾಮವನ್ನುಚ್ಚರಿಸುತ್ತಾ, ಜನಾರ್ದನ ದರ್ಶನ ದಿಂದ ಪುಳುಕಿತಳಾಗುತ್ತಾ, ಜನಾರ್ದನನಿಗರ್ಪಿತವಾದ ಪ್ರಸಾದ ವನ್ನು ಭೋಜನಮಾಡುತ್ತಾ, ಅರ್ಪಿತವಿಲ್ಲದುದನ್ನು ಪರಿತ್ಯಜಿ ಸುತ್ತಾ, ಪರಪುರುಷರನ್ನು ಪಾದದಿಂದಲೂ ಸ್ಪರ್ಶಿಸದೆ ಫಲಪುಷ್ಪ ಗಳೇನು ದೊರೆತರೂ ಶ್ರೀಹರಿಗೆ ಸಮರ್ಪಿಸಿ ಶೇಷವನ್ನು ಸ್ವೀಕರಿ ಸುತ್ತಾ, ಶ್ರೀಹರಿಯ ವೈಭವವನ್ನು ಹಾಡಿಪಾಡಿ ಆನಂದಬಾಷ್ಪ ಗಳನ್ನು ಸುರಿಸುತ್ತಾ, ದಿವ್ಯಕುಸುಮಗಳಿಂದ ತನ್ನನ್ನಲಂಕರಿಸಿ ಶ್ರೀಜನಾರ್ದನನಿಗೆ ತಾನು ಸ್ವೀಕಾರಾರ್ಹಳಾಗಿರುವೆನೇ ಎಂದು ತಾನೇ ನೋಡಿಕೊಳ್ಳುತ್ತಾ, ಸಖೀಜನರಿಂದೊಡಗೂಡಿ ಶ್ರೀಕೃಷ್ಣನು ಗೋಪಿಕಾಸ್ತ್ರೀಯರೊಡನಾಡಿದ ವಿಭವಯುಕ್ತ ಚರಿತ್ರೆಗಳನ್ನು ಹೇಳುತ್ತಾ, ಆನಂದಭರಿತಳಾದಳು.

ಇಲ್ಲಿಗೆ ಮೂರನೇ ಅಧ್ಯಾಯವು ಮುಗಿದುದು.



# ನಾಲ್ಕನೇ ಅಧ್ಯಾಯ

೧

ಗೋದಾವರಿ ತೀರದಲ್ಲಿ ರಾಜಮಹೇಂದ್ರವೆಂಬ ನಗರವಿರುವದು. ಮಾರ್ಕಂಡೇಯ ಮುನಿಯಿಂದ ಪ್ರತಿಷ್ಠಿತವಾದ ಶಿವಾಲಯುದಿಂದ ಆ ನಗರವು ಪಾವನಕ್ಷೇತ್ರವೆನಿಸಿರುವದು. ಕೋಟೆಗಳ ಪ್ರಾಕಾರಗಳಿಂದಲೂ ಗೋಪುರಗಳಿಂದಲೂ ಎತ್ತರವಾದ ಸೌಧಗಳಿಂದಲೂ ವಿಹಾರಯೋಗ್ಯಗಳಾದ ಚಂದ್ರಶಾಲೆಗಳಿಂದಲೂ ದೇವಾಲಯುಗಳಿಂದಲೂ ಉತ್ತಮವಾದ ಆರಾಮುಗಳಿಂದಲೂ ಕ್ರೀಡಾಮಂಟಪಗಳಿಂದಲೂ ಅಲ್ಲಲ್ಲಿ ವೇದಿಕೆಗಳಿಂದಲೂ ನಗರವು ಶೋಭಾಯುಮಾನವಾಗಿರುವದು. ಮನೆಮನೆಗಳ ಮುಂಭಾಗಗಳಲ್ಲಿ ಫಲಭರಿತವಾದ ಆರಾಮುಗಳು ರಂಜಿಸುತ್ತಿರುವವು. ದಿವ್ಯರತ್ನಗಳೇನು ದಿವ್ಯಾಂಬರಗಳೇನು ಬೇಕುಬೇಕಾದ ಭೋಗ್ಯವಸ್ತುಗಳೇನು ಇವುಗಳಿಂದ ಪೇಟೆಬೀದಿಗಳು ಭರಿತವಾಗಿರುವವು. ಬೀದಿಬೀದಿಗಳಲ್ಲಿ ದಿವ್ಯಾಲಂಕೃತಗಳಾದ ಗಜತುರಗಗಳನ್ನೇರಿ ವೀರಭಟರು ಸಂಚರಿಸುತ್ತಿರುವರು. ಒಂದೇ ಮಾತಿನಿಂದ ವರ್ಣಿಸುವದಾದರೆ ರಾಜಮಹೇಂದ್ರವು ಸ್ವರ್ಗಸದೃಶವಾಗಿರುವದು. ಈ ಪಟ್ಟಣದಲ್ಲಿ ಪಾರ್ಥಕುಲಜಾತನೂ ಚಂದ್ರವಂಶೀಯನೂ ಚಾಲುಕ್ಯಕುಲಶೇಖರನೂ ಆದ ವಿಷ್ಣುವರ್ಧನನೆಂಬ ರಾಜನಿರುವನು.

ವಿಷ್ಣುವರ್ಧನನು ಶಿವಪೂಜಾಧುರಂಧರನು. ಶೈವಾಗಮಗಳನ್ನು ವಿಶೇಷವಾಗಿ ತಿಳಿದವನು. ಕೋಟಿಲಿಂಗಗಳನ್ನು ಪ್ರತಿಷ್ಠಿಸಿ

ಪ್ರತ್ಯಹವೂ ಆಗಮವಿಹಿತರೀತಿಯಿಂದ ಪೂಜಿಸುವವನು. ಇವನು ಹರಿನಾಮವನ್ನು ಕಿವಿಯಿಂದಲೂ ಕೇಳುವವನಲ್ಲ. ಕೇಳಿದರೆ ಕಿವಿಗಳನ್ನು ಮುಚ್ಚಿಕೊಳ್ಳುವನು. ಪೂಜಾರ್ಹಗಳಾದ ವಿಷ್ಣುವಿಗ್ರಹಗಳನ್ನು ಕಂಡರೆ ಕೂಡಲೇ ಧ್ವಂಸಗೊಳಿಸುವನು. ವಿಷ್ಣುದೇವಾಲಯಗಳನ್ನು ನಾಶಮಾಡುವನು. ಆದ್ದರಿಂದ ಇವನನ್ನು—ಸ್ಮೃತ್ಯವರ್ಧಕನೆಂದರೆ ಸ್ಮೃತ್ಯನಾಶಕನೆಂದು ಕರೆಯುವಂತೆ ವಿಷ್ಣುನಾಶಕನೆಂಬ ಅರ್ಥದಿಂದ ವಿಷ್ಣುವರ್ಧನನೆಂದು ಕರೆಯುತ್ತಿರುವರು. ಇವನ ರಾಜ್ಯವು ಬಹು ವಿಶಾಲವಾಗಿರುವದು. ಇವನ ಬಾಧೆಯಿಂದ ಅನೇಕ ವೈಶ್ಯರು ಕರ್ನಾಟಕದೇಶದಲ್ಲಿ ಬಂದು ನೆಲೆಸಿದರು. ತಮ್ಮ ಪವಿತ್ರ ಕ್ಷೇತ್ರದ ಹೆಸರಿನಿಂದ (ಘನಗಿರಿ ಅಥವ ಮಹಾದ್ರಿ = ಪೆನುಕೊಂಡ) (Ananthapur Dist.) ಪ್ರತ್ಯೇಕ ಪಟ್ಟಣವನ್ನು ನಿರ್ಮಿಸಿ ಅಲ್ಲಿ ಸುಖದಿಂದ ವಾಸಮಾಡಿದರು. ವಾಸವಶ್ರೇಷ್ಠಿಯ ಭಾವನಾದ ಶ್ರೀಧರ ಶ್ರೇಷ್ಠಿಯು ಪೆನುಗೊಂಡೆಗೆ ಒಡೆಯನಾದನು. ಒಂದು ಸಮಯದಲ್ಲಿ ಕುಸುಮಾಂಬೆಯು ಕನ್ನಿಕೆಯೊಡನೆ ಈ ಪಟ್ಟಣಕ್ಕೆ ಬಂದು ತನ್ನ ಅಣ್ಣನ ಮನೆಯಲ್ಲಿ ಮೂರು ತಿಂಗಳಕಾಲ ವಾಸಮಾಡಿದಳು. ಈ ಕಾರಣದಿಂದ ಪೆನುಗೊಂಡೆಯೂ (ಚಿಕ್ಕತಿರುಪತಿ ಎಂಬಂತೆ) ವೈಶ್ಯರ ಪಾವನಸ್ಥಳವೆನಿಸುವದು.

ಒಂದು ದಿನ ವಿಷ್ಣುವರ್ಧನನು ಪದ್ಧತಿಯಂತೆ ಮಹಾಲಿಂಗಾರ್ಚನೆಮಾಡಿ, ಶುಭಲಗ್ನದಲ್ಲಿ ದಿಗ್ವಿಜಯಯಾತ್ರೆ ಹೊರಡಲು ನಿಶ್ಚಯಿಸಿದನು. ಛತ್ರಚಾಮರಗಳನ್ನು ಹಿಡಿಸಿಕೊಂಡು ದಿವ್ಯಾಶ್ವವನ್ನೇರಿ ಹೊರಟ ರಾಜನನ್ನು ಚತುರಂಗಬಲವು ಹಿಂಬಾಲಿಸಿತು. ಮಹಾರಾಜನು ಜಯಶೀಲನಾಗಿ ಬರಲೆಂದು ಬ್ರಾಹ್ಮಣರು ಆಶೀರ್ವಾದಮಾಡಿದರು. ರಾಜಸ್ತ್ರೀಯರು ಆರತಿಗಳನ್ನೆತ್ತಿದರು. ದಾರಿಯುದ್ದಕ್ಕೂ ಜನರು ಪುಷ್ಪಾಂಜಲಿಗಳನ್ನೊಪ್ಪಿಸಿದರು. ಭೇರಿ

ದುಂದುಭಿಗಳು ಮೊಳಗಿದವು. ಮನೋಹರವಾದ ಕುದುರೆಗಳಿಂದೊಪ್ಪುವ ದಿವ್ಯರಥಗಳು ಸಾಲಾಗಿ ಹೊರಟವು. ಆಯುಧಪಾಣಿಗಳಾದ ಭಟರು ತಾಳಗತಿಯಂತೆ ಹೆಜ್ಜೆಗಳನ್ನಿಡುತ್ತಾ ನಡೆದರು. ಮಹಾಸೈನ್ಯದ ಪದಹತಿಯಿಂದುಂಟಾದ ಧೂಳಿನಿಂದ ದಿಕ್ಕುಗಳು ಅಂಧಕಾರಮಯವಾದವು. ಮಧ್ಯೆಮಧ್ಯೆ ಶಸ್ತ್ರಗಳ ಸಂಘಟನೆಯಿಂದುಂಟಾದ ಕಿಡಿಗಳಿಂದ ಕತ್ತಲೆಯು ಪರಿಹಾರವಾಗುತ್ತಿತ್ತು. ವಿಷ್ಣುವರ್ಧನನು ಕೆಲವುದೂರ ಕುದುರೆಯಮೇಲೆ ಸವಾರಿಬರುತ್ತಿದ್ದವನು ದಿವ್ಯರಥವನ್ನೇರಿದನು. ಇವನ ಪ್ರತಾಪ ಸಾಮರ್ಥ್ಯಗಳನ್ನು ಕೇಳಿದ ರಾಜರು ಭೀತರಾಗಿ ಕಪ್ಪಕಾಣಿಕೆಗಳನ್ನೊಪ್ಪಿಸಿ ಶರಣಾಗತರಾದರು. ಪಾಂಚಾಲರು ಯುದ್ಧಕ್ಕೆ ಬರಲು ಅವರನ್ನು ವಂಚನೆಯಿಂದ ಜೈಸಿದನು. ಪಾಂಡ್ಯರನ್ನು ಖಂಡ್ರಿಸಿದನು. ಕಳಿಂಗರನ್ನು ಲಿಂಗಾರ್ಚನಪರರನ್ನಾಗಿ ಮಾಡಿದನು. ಇವನ ಪರಾಕ್ರಮದಿಂದ ವಿದೇಹಾಧಿಪತಿಗಳು ವಿದೇಹಿಗಳಾದರು. ದಾಶಾರ್ಣರು ಅರ್ಣವದ ಪಾಲಾದರು. ಯವನರು ನಷ್ಟಭವನರಾದರು. ಘೂರ್ಜರು ತರ್ಜಿತರಾದರು. ಹೀಗೆ ಮಹಾರಾಜನು ಕಂಡಕಂಡ ರಾಜರನ್ನು ಜೈಸುತ್ತಾ, ಗಿರಿ ದುರ್ಗವಾಸಿಗಳೂ ಅಜೇಯರೂ ಆದ ನಾಯಕರುಗಳನ್ನು ವಹ್ನಿಯಂತ್ರಗಳಿಂದಲೂ ಶಿಲಾಯಂತ್ರಗಳಿಂದಲೂ ಸುಟ್ಟು, ದುರ್ಗಗಳನ್ನು ಕೆಡಹಿ, ಮೃತರಾದ ರಾಜರುಗಳ ಪುತ್ರರು ತನಗೆ ಶರಣಾಗತರಾದರೆ ಅವರಿಗೆ ಅವರ ರಾಜ್ಯಗಳನ್ನು ಹಿಂದಿರುಗಿ ಕೊಡುತ್ತಾ, ವಿವಿಧಾಸ್ತ್ರಗಳಿಂದಲೂ ಶೂಲಾಯುಧಗಳಿಂದಲೂ ಶಬ್ದವೇಧಿಗಳಿಂದಲೂ ಜನಪದಗಳನ್ನು ನಾಶಗೊಳಿಸುತ್ತಾ ಬಂದನು.

ಕಲ್ಯಾಣಪಟ್ಟಣಕ್ಕೆ ಬರಲು ಮಹಾಬಾಹುವೆಂಬ ಪರಾಕ್ರಮಿಯಾದ ಅರಸನು ವಿಷ್ಣುವರ್ಧನನೊಡನೆ ಚತುರಂಗಬಲ ಸಮೇತನಾಗಿ ಯುದ್ಧಕ್ಕೆ ಬಂದನು. ವಿಷ್ಣುವರ್ಧನನ ಸೈನಿಕರು ತಮಗೆದು

ರ್‍ಯಾರೆಂಬ ಗರ್ವದಿಂದ ವೈಮರೆತು ಪರಸ್ಪರ ಸಲ್ಲಾಪಗಳಲ್ಲಿ ಆಸಕ್ತರಾಗಿದ್ದರು. ಆ ಸಮಯದಲ್ಲಿ ಮಹಾಬಾಹುವು ಮೇಲೆಬಿದ್ದು ಶತ್ರುಸೈನ್ಯವನ್ನು ಧ್ವಂಸಮಾಡುತ್ತಾಬರಲು ವಿಷ್ಣುವರ್ಧನನು ಚಕಿತನಾದನು. ಉಭಯ ಸೈನ್ಯಗಳಿಗೂ ದ್ವಂದ್ವಯುದ್ಧವಾಯಿತು. ಅಶ್ವಾರೋಹಿಗಳು ಅಶ್ವಾರೋಹಿಗಳೊಡನೆಯೂ, ಗಜಾರೋಹಿಗಳು ಗಜಾರೋಹಿಗಳೊಡನೆಯೂ, ರಥಿಕರು ರಥಿಕರೊಡನೆಯೂ, ಪದಾತಿಗಳು ಪದಾತಿಗಳೊಡನೆಯೂ ಸರಿಸರಿಯಾಗಿ ಯುದ್ಧಮಾಡಿದರು. ಉಭಯ ಸೈನ್ಯಗಳಲ್ಲೂ ನಿಮಿಷ ನಿಮಿಷಕ್ಕೆ ಅಗಣಿತ ಜನರು ಮಡಿದರು. ಈ ಘೋರ ಸಂಗ್ರಾಮವನ್ನು ವಿಮಾನರೂಢರಾದ ದೇವತೆಗಳು ನೋಡುತ್ತಾ ವೀರರನ್ನು ಶ್ಲಾಘಿಸುತ್ತಿದ್ದರು. ವೀರರು ರಣಭೇರಿಗಳ ನಿನಾದದಿಂದ ಹುರಿಗೊಂಡವರಾಗಿ ಈ ರಣಯಜ್ಞದಲ್ಲಿ ತಾವು ಮೃತರಾದರೆ ವೀರಸ್ವರ್ಗ ಬರುವದೆಂದೂ, ಅಪ್ಸರೆಯರು ತಮ್ಮನ್ನಾಲಿಂಗಿಸುವರೆಂದೂ ನಂಬಿ, ಮುಂದಿಟ್ಟ ಹೆಜ್ಜೆಯನ್ನು ಹಿಂದಿಡದೆ ಶತ್ರುಗಳ ರುಂಡಗಳನ್ನು ತುಂಡರಿಸಿದರು. ವೀರರ ಕಾಲ್ಪನಿಕ ಮನೋಭೂಮಿಕೆಯಲ್ಲಿ ಅಪ್ಸರೆಯರು ಮಾಲೆಗಳನ್ನು ಹಿಡಿದು—ಇವನು ನನಗೆ ಅವನು ನಿನಗೆ ಎಂದುಕೊಳ್ಳುತ್ತಿದ್ದಂತೆ ಭಾಸವಾಯಿತು. ಕಡೆಗೆ ವಿಷ್ಣುವರ್ಧನನು ಕಾಲಭೈರವನಂತೆ ಶತ್ರುಸೈನ್ಯವನ್ನು ನುಗ್ಗಿದನು. ಕಣ್ಣುಗಳಿಂದ ಕಿಡಿಗಳನ್ನುಗುಳುತ್ತಾ ಅಲಾತಚಕ್ರದಂತೆ ಗಿರಗಿರನೆ ತಿರುಗಿ ಕಂಡವರನ್ನು ತುಂಡರಿಸಿ ಘೋರಯುದ್ಧಮಾಡಿದನು. ವಿಷ್ಣುವರ್ಧನನೇ ಮುಂದರಿದು ಮಾಡುತ್ತಿರುವ ಯುದ್ಧವನ್ನು ನೋಡಿ ಅವನ ಸೈನಿಕರು ಜೀವದ ಹಂಗನ್ನು ತೊರೆದು ಕಾದಿದರು. ಮಹಾಬಾಹುವಿನ ಸೈನಿಕರು ನಾಶಹೊಂದಿ ಪಲಾಯನಮಾಡಿದರು. ಚತುರ್ದಿಕ್ಕುಗಳಲ್ಲೂ ಶತ್ರುಗಳನ್ನು ಮುತ್ತಿ ವಿಷ್ಣುವರ್ಧನನು ಜಯಶೀಲನಾದನು.

ಜಯಶೀಲನಾದ ವಿಷ್ಣುವರ್ಧನನು ವೀರರಿಂದ ಹೊಗಳಿಸಿ ಕೊಳ್ಳುತ್ತಾ, ರಾಜಧಾನಿಗೆ ತೆರಳಲುದ್ಯುಕ್ತನಾಗಿ ಮಾರ್ಗದಲ್ಲಿ ಕೃಷ್ಣಾನದಿಯಲ್ಲಿ ಮಿಂದು ವನದುರ್ಗಿಯನ್ನು ವಿಧಿವತ್ತಾಗಿ ಪೂಜಿಸಿದನು. ಇಂದ್ರಕೀಲದಲ್ಲಿ ಮಹಾದೇವನ ದರ್ಶನಮಾಡಿ ಭಸ್ಮರುದ್ರಾಕ್ಷಗಳಿಂದಲಂಕೃತನಾಗಿ ವಾತೂಲಾದಿ ಶೈವಾಗಮಗಳನ್ನು ಪಠಿಸಿದನು. ಈಶ್ವರಾನುಗ್ರಹದಿಂದ ತನ್ನ ಜಯಯಾತ್ರೆಯು ನಿರ್ವಿಘ್ನವಾಗಿ ನಡೆಯಿತೆಂಬ ಸಂತೋಷದಿಂದ ರಾಜನು—ಶೂಲಪಾಣೇ, ಶಂಭೋ, ಮಹಾದೇವ, ಮೃತ್ಯುಂಜಯ ಎಂಬದಾಗಿ ಶಿವನಾಮಗಳನ್ನು ಜಪಿಸುತ್ತಾ, ಆ ಮಹಾಕ್ಷೇತ್ರದಲ್ಲಿ ಕೆಲವುಕಾಲ ವಾಸಮಾಡಿ ಶಿವದ್ವಿಜರಿಗೆ ಬೇಕಾದ ದಾನಧರ್ಮಗಳನ್ನು ಮಾಡಿದನು. ಅನಂತರ ಮತ್ತೆ ಪ್ರಯಾಣಮಾಡಿ ವನಗಿರಿಗಳನ್ನು ದಾಟಿ ಬರುತ್ತಿರಲು ಮಹಾದ್ರಿಪುರವು ಮಹಾರಾಜನ ದೃಷ್ಟಿಗೋಚರವಾಯಿತು.

ಇದುವರೆಗೆ ಮಹಾದ್ರಿಪುರವು ತನ್ನ ರಾಜಧಾನಿಗೆ ಸಮೀಪದಲ್ಲಿದ್ದರೂ ಮಹಾರಾಜನಿಗೆ ಆ ನಗರಿಯನ್ನು ನೋಡುವ ಅವಕಾಶ ದೊರೆತಿರಲಿಲ್ಲ. ಯುಕ್ತಿವಂತರಾದ ವೈಶ್ಯರು ರಾಜನಿದ್ದಬಳಿಗೇ ಕಾಲಕಾಲಕ್ಕೆ ಕಪ್ಪಕಾಣಿಕೆಗಳನ್ನು ಕಳುಹಿಸಿ ಅವನ ದೃಷ್ಟಿಗೆ ಬೀಳದಂತೆ ನಗರರಕ್ಷಣೆಮಾಡಿಕೊಂಡಿದ್ದರು. ರಾಜನು ದೂರದಿಂದಲೇ ಮಹಾಪಟ್ಟಣವನ್ನು ನೋಡಿ ವಿಸ್ಮಿತನಾದನು. ಯಾವ ದೈವಿಕ ಪ್ರೇರಣೆಯಿಂದಲೋ ಸೈನ್ಯವನ್ನು ನಗರದ ಹೊರಭಾಗದ ಉದ್ಯಾನದಲ್ಲಿ ಬಿಟ್ಟು ಆದರಬುದ್ಧಿಯಿಂದ ಮಂತ್ರಿಯೊಂದೊಡಗೂಡಿ ಗಜಾರೂಢನಾಗಿ ನಗರಪ್ರವೇಶಮಾಡಿದನು.

ಬ್ರಾಹ್ಮಣರ ಅಗ್ರಹಾರದಲ್ಲಿ ಒಂದುಕಡೆ ವೇದಾಭ್ಯಾಸ ನಡೆಯುತ್ತಿತ್ತು. ಮತ್ತೊಂದುಕಡೆ ನ್ಯಾಯ ವ್ಯಾಕರಣ ಕಾವ್ಯಾಲಂಕಾರ ಪಾಠಕರು ತಮ್ಮ ವೇದಿಕೆಗಳಲ್ಲಿ ಕುಳಿತು ಶಿಷ್ಯರಿಗೆ ಪಾಠಹೇಳು

ತ್ತಿದ್ದರು. ಒಂದುಕಡೆ ವಿಷ್ಣುಧರ್ಮೋತ್ಕರ್ಷದ ಮಾತುಗಳು ನಡೆಯುತ್ತಿದ್ದವು. ಶಿಷ್ಯವೃತ್ತಿಯಲ್ಲಿರುವ ವಟುಗಳು ಪೂಜಾ ಯೋಗ್ಯಗಳಾದ ಬಿಲ್ವತುಲಸೀಪುಷ್ಪಗಳನ್ನೂ, ಅಗ್ನಿದೇವತಾರಾಧ ನೆಗೆ ಬೇಕಾದ ಸಮಿತ್ತುಗಳನ್ನೂ ಶೇಖರಿಸುತ್ತಿದ್ದರು. ಭಿಕ್ಷುಕರು ನಾರಾಯಣ ನಾಮೋಚ್ಚಾರಣೆಮಾಡುತ್ತಾ ಮನೆಮನೆಗಳ ಬಾಗಿಲು ಗಳಲ್ಲಿ ಭಿಕ್ಷಸಂಗ್ರಹಮಾಡುತ್ತಿದ್ದರು. ಹರಿನಾಮಗಳನ್ನು ಕೇಳಿದ ಕೂಡಲೇ ವಿಷ್ಣುವರ್ಧನನು, ಶಿವಶಿವ ಎಂದು ಕಿವಿಗಳನ್ನು ಮುಚ್ಚಿ ದನು. ಮುಂದೆ ಬರುತ್ತಿರಲು ಸುವರ್ಣಮಯವಾದ ಚಕ್ರಗಳಿಂದ ಚತುರ್ದಿಕ್ಕುಗಳಲ್ಲೂ ಚಿಹ್ನಿತವಾಗಿ ಧ್ವಜವಲ್ಲಿ ಗರುಡಪ್ರತಿಮೆಯಿಂದ ಚಿತ್ರಿತವಾಗಿರುವ ಜನಾರ್ದನದೇವಾಲಯದ ವಿಮಾನವನ್ನು ಕಂಡನು. ಮತ್ತೂ ನೋಡಬಾರದುದನ್ನು ನೋಡಿದೆನೆಂದವನು ತನ್ನ ಉಷ್ಣೀಷ ದಿಂದ ಕಣ್ಣುಗಳನ್ನು ಕಟ್ಟಿಕೊಂಡನು. ಮುಂದೆ ಇಂಥಾ ನೋಟ ಗಳನ್ನು ನೋಡಬಾರದೆಂದು ಕೂತಿದ್ದ ಗಜವನ್ನು ಬೇಗ ನಡೆಸುವಂತೆ ಆಜ್ಞೆಮಾಡಿದನು. ದೂತರನ್ನು ಕರೆಯಿಸಿ ವಿಷ್ಣು ವಿಗ್ರಹಗಳನ್ನು ನಾಶಗೊಳಿಸಬೇಕೆಂದೂ, ವಿಷ್ಣುದೇವಾಲಯಗಳ ಮಹಾದ್ವಾರಕ್ಕೆ ಕಲ್ಲುಮುಳ್ಳುಗಳಿಂದ ಮಾರ್ಗನಿರೋಧಮಾಡ ಬೇಕೆಂದೂ ಅಪ್ಪಣೆಮಾಡಿದನು. ಸ್ವಲ್ಪ ಮುಂದರಿದುಬರಲು ಜನಾ ರ್ದನ ದೇವಾಲಯದಂತೆಯೇ ವಿರಾಜಿತವಾಗಿ ನಂದೀಧ್ವಜದಿಂದಲೂ ತ್ರಿಶೂಲಾದಿ ಚಿಹ್ನೆಗಳಿಂದಲೂ ಚಿತ್ರಿತವಾಗಿರುವ ನಗರೇಶ್ವರ ದೇವಾ ಲಯವನ್ನು ಕಂಡನು.

ಶೈವಚಿಹ್ನೆಗಳನ್ನು ಕಂಡು ರಾಜನ ಮನಸ್ಸು ಬದಲಾಯಿಸಿತು. ತತ್ಕ್ಷಣ ಆನೆಯಿಂದ ಕೆಳಗಿಳಿದು ಶಿವಾಲಯವೆಂಬುದನ್ನು ನಿರ್ಧರಿಸಿ ಮಹಾದ್ವಾರದಲ್ಲಿ ಸಾಷ್ಟಾಂಗ ನಮಸ್ಕಾರಮಾಡಿದನು. ಶಿವನಾಮೋ ಚ್ಚಾರಣೆಮಾಡುತ್ತಾ:—

**ಚಕ್ರೇಶೈವವಿಧಾನೇನಸವ್ಯಾಸವ್ಯಗತೀರಿಕಂ**
**ವೃಷಃ ಚಂಡಂ ವೃಷಂ ಚಂಡಂ ಪುನಶ್ಚಂಡಂ ಪುನರ್ವೃಷಂ**
**ವೃಷಂಚ ನಂದಿಕೇಶಂಚ ಪುನಶ್ಚಂಡಂ ಪುನರ್ವೃಷಂ**

ಎಂಬ ವಿಧಿಯಂತೆ ಸವ್ಯಾಪ ಸವ್ಯಗತಿಯಿಂದ ಶಿವನನಮಸ್ಕಾರಮಾಡಿದನು. ಎದ್ದು ನಿಂತು ಕಪೋಲತಾಡನೆಮಾಡಿಕೊಳ್ಳುತ್ತಾ, ಶಿವನಾಮೋಚ್ಚಾರಣೆಮಾಡುತ್ತಾ, ಫಲಪುಷ್ಪಾದಿಗಳನ್ನು ಸಮರ್ಪಿಸಿ, ಶಿವನಿರ್ಮಾಲ್ಯವನ್ನು ಶರೀರಕ್ಕೆ ಲೇಪಿಸಿಕೊಂಡು ಪಟ್ಟಣದ ವೈಭವವನ್ನು ನೋಡುವದಕ್ಕೆ ಹೊರಟನು.

ವೈಶ್ಯಪ್ರವರರ ಒಂದೊಂದು ಮನೆಗಳೂ ಸಮವಾಗಿ ದಿವ್ಯಗೋಪುರಗಳಿಂದ ಶೋಭಿಸುತ್ತಿದ್ದವು. ಸುವರ್ಣದಿಂದ ಚಿತ್ರಿತವಾದ ಪೀತಾಂಬರಗಳು ಗೋಪುರಗಳಲ್ಲಿ ಅಲಂಕೃತವಾಗಿದ್ದವು ಉದಕಪೂರಿತ ಸುವರ್ಣಕುಂಭಗಳನ್ನು ಅಲ್ಲಲ್ಲಿ ಇಟ್ಟಿದ್ದರು. ಮನೆಗಳು—ಮನೆಗಳನ್ನು ದಾಟಿದರೆ ದಿವ್ಯಗೋಪುರಗಳಿಂದ ವಿರಾಜಿತವಾಗಿರುವ ದೇವಾಲಯಗಳು,—ಅನಂತರ ಅವಕ್ಕೆ ಸಂಬಂಧಪಟ್ಟ ದಿವ್ಯೋದ್ಯಾನಗಳು—ಉದ್ಯಾನಗಳಲ್ಲಿ ತುಲಸೀಪುಷ್ಪ ಬಿಲ್ವವೃಕ್ಷಗಳು—ಕ್ರೀಡಾರ್ಥವಾಗಿ ರಚಿಸಿದ ಕೃತ್ರಿಮ ಶೈಲಗಳು—ಅವುಗಳ ಬಳಿಯಲ್ಲಿ ಸರೋವರಗಳು— ಧನಧಾನ್ಯಗಳಿಂದಲೂ ರತ್ನಮುತ್ತುಗಳಿಂದಲೂ ವಸ್ತ್ರಭೂಷಣಗಳಿಂದಲೂ ಭರಿತವಾಗಿರುವ ಅಂಗಡಿಗಳು—ಇವುಗಳನ್ನೆಲ್ಲಾ ನೋಡುತ್ತಾ, ಮಹಾಮಂಡಲೇಶ್ವರನೆನಿಸಿದರೂ ತನ್ನ ರಾಜಧಾನಿಯು ಇಷ್ಟು ಸುಂದರವಾಗಿಲ್ಲ; ಇಷ್ಟು ಐಶ್ವರ್ಯಭರಿತವಾಗಿಲ್ಲ; ಎಂದು ದುಃಖಿತನಾದನು. ಆ ನಗರದಲ್ಲಿ ಪ್ರತ್ಯೇಕಪ್ರತ್ಯೇಕವಾಗಿರುವ ಬ್ರಹ್ಮಕ್ಷತ್ರ ವೈಶ್ಯ ಶೂದ್ರರ ಬೀದಿಗಳನ್ನು ನೋಡಿ, ನೋಡಿದಹಾಗೆಲ್ಲಾ ಕ್ರೋಧಯುಕ್ತನಾಗಿ ವಿಷ್ಣುವರ್ಧನನು ನಡೆದನು.

ಇಂತಹ ಪಟ್ಟಣದಲ್ಲೂ ವಾರವನಿತೆಯರಿರದಿರಲಿಲ್ಲ. ಅವರು ತಮ್ಮ ಸೌಧಗಳಲ್ಲಿ, ದಿವ್ಯಾಲಂಕೃತರಾಗಿ ಮಾಲಿಕೆಗಳನ್ನೂ ಪುಷ್ಪ ಗುಚ್ಛಗಳನ್ನೂ ಕೈಯಲ್ಲಿ ಹಿಡಿದು, ನೇತ್ರಸಂಜ್ಞೆಯಿಂದಲೂ ಗಾನ ನರ್ತನಗಳಿಂದಲೂ ಕಾಮುಕರ ಸರ್ವಸ್ವವನ್ನೂ ಹರಣಮಾಡಲು ಸಜ್ಜಿತರಾಗಿದ್ದರು. ಪಟ್ಟಣದ ಕೊನೆಯಭಾಗವಲ್ಲಿ ಚತುರ್ದಿಕ್ಕು ಗಳಲ್ಲಿ ಗಜಶಾಲೆಗಳೂ ಅಶ್ವಶಾಲೆಗಳೂ ಗೋಶಾಲೆಗಳೂ ರಂಜಿಸು ತ್ತಿದ್ದವು.

ಅನಾಹೂತನಾಗಿ ರಾಜನು ನಗರಪ್ರವೇಶಮಾಡಿ ಜನಾರ್ದನ ದೇವಾಲಯದ ಮಹಾದ್ವಾರ ಬಂಧನಮಾಡಿಸಿದುದನ್ನೂ, ನಗರದ ಬೀದಿಗಳಲ್ಲಿ ಸಂಚರಿಸುತ್ತಿರುವದನ್ನೂ ಕೇಳಿ, ವೈಶ್ಯರು ಭೀತರಾದರು. ಏನೇಮಾಡಲಿ, ರಾಜನೆಂಬ ಗೌರವಬುದ್ಧಿಯಿಂದ ರಾಜಯೋಗ್ಯವಾದ ಕೆಂಪುವರ್ಣದ ಪಟ್ಟೆವಸ್ತ್ರಗಳನ್ನೂ, ಕಟಕಕೇಯೂರ ಮುದ್ರಿಕಾದಿ ದಿವ್ಯಾಭರಣಗಳನ್ನೂ ಕಾಣಿಕೆಯಿತ್ತು ಆತನನ್ನು ವಂದಿಸಿದರು. ಮಹಾಪ್ರಭೋ—'ತಮ್ಮ ಆಗಮನದಿಂದ ನಾವು ಕೃತಾರ್ಥರಾದೆವು. ತಮ್ಮ ದರ್ಶನದಿಂದ ಪುಣ್ಯವಂತರಾದೆವು. ನಮ್ಮ ಬಡ ಆತಿಥ್ಯ ವನ್ನು ಸ್ವೀಕರಿಸಿ ನಮ್ಮನ್ನು ರಕ್ಷಿಸಬೇಕು' ಎಂದು ವಿನಯಾನ್ವಿತ ರಾಗಿ ಬೇಡಿಕೊಂಡರು. ರಾಜನು ವೈಶ್ಯರನ್ನು ಸನ್ಮಾನಿಸಿದನು. ಅವರು ಕೊಟ್ಟ ಉಪಾಯನವನ್ನು ಸ್ವೀಕರಿಸಿದನು. ತನಗಾಗಿ ಸಿದ್ಧ ಗೊಳಿಸಿದ ದಿವ್ಯಗೃಹದಲ್ಲಿ ಬಂದಿಳಿದನು. ಯಾವ ರೀತಿಯಿಂದಲೂ ರಾಜನು ಅಸಂತುಷ್ಟನಾಗದಂತೆ ವೈಶ್ಯರು ತಕ್ಕ ವ್ಯವಸ್ಥೆಗಳನ್ನು ಮಾಡಿದರು. ಮಹಾರಾಜನು ಸುಗಂಧತೈಲಗಳಿಂದ ಅಭ್ಯಂಗಸ್ನಾನ ಮಾಡಿದನು. ನಿತ್ಯಕರ್ಮಗಳನ್ನು ಮುಗಿಸಿ ಮಹಾಲಿಂಗಾರ್ಚನೆ ಮಾಡಿದನು. ಮೃಷ್ಟಾನ್ನಭೋಜನದಿಂದ ಸಂತುಷ್ಟನಾದನು. ಪರಿ ಮಳ ತಾಂಬೂಲವನ್ನು ಸವಿದನು. ಮಂತ್ರಿಗಳಿಂದ ಸಹಿತನಾಗಿ

ಮೇಲ್ಮಹಡಿಯಮೇಲೆ ಶತಪಥ ತಿರುಗುತ್ತಾ ನಗರದ ಸೌಭಾಗ್ಯವನ್ನು ನೋಡಿದನು.

ಅಷ್ಟುಹೊತ್ತಿಗೆ ಸರಿಯಾಗಿ ವಾಸವನು ಪುಷ್ಪಮಾಲಿಕೆಗಳನ್ನು ತನ್ನ ಕೈಯಿಂದ ಕಟ್ಟಿ, ಕುಸುಮಗಂಧವನ್ನಾಘ್ರಾಣಿಸಿದರೆ ಎಲ್ಲಿ ನಿರ್ಮಾಲ್ಯವಾಗುವದೋ ಎಂಬ ಭಯದಿಂದ ಮೂಗಿಗೆ ಬಟ್ಟೆಯನ್ನು ಕಟ್ಟಿಕೊಂಡು, ಪುಷ್ಪಪೇಟಿಕೆಯನ್ನು ತಲೆಯಮೇಲೆ ಹೊತ್ತುಕೊಂಡು, ಜನಾರ್ದನ ದೇವಾಲಯದ ಬಳಿಗೆಬಂದನು. ಮಂದಿರದ ಮಹಾದ್ವಾರವು ಕಲ್ಲುಮುಳ್ಳುಗಳಿಂದ ಮುಚ್ಚಲ್ಪಟ್ಟಿತ್ತು. ಒಳಗೆ ಪ್ರವೇಶಿಸಲು ಮಾರ್ಗನಿರೋಧವಾಗಿತ್ತು. ಇದನ್ನು ಕಂಡು ವಾಸವನು ದುಃಖಾರ್ತನಾದನು. ಹಾ! ಏನು ಅನಾಹುತವಾಯಿತೆಂದು ಭೂಮಿಗುರುಳಿದನು. ಸಂಜ್ಞೆ ತಿಳಿದು, ಅತ್ಯಾಚಾರಮಾಡಿದವನು ವಿಷ್ಣುವರ್ಧನನೆಂದರಿತನು. ರಾಜನಾಗಿ ಇಂಥಾ ಅಪಚಾರಮಾಡಿದನೆ? ಅವನಿಗೆ ಧಿಕ್ಕಾರವಿರಲಿ! ಅವನ ರಾಜ್ಯಕ್ಕೂ ಜೀವಿತಕ್ಕೂ ಧಿಕ್ಕಾರವಿರಲಿ! ಎಂದು ಅವನನ್ನು ಶಪಿಸಿದನು. ಆ ಪಾಪಿಯನ್ನೀಗಲೇ ಕಾಣುವೆನು. ಹರಿಕಥಾಶ್ರವಣಮಾಡಿಸಿ ಬುದ್ಧಿಕಲಿಸುವೆನು. ದೇವಾಲಯವನ್ನು ಶುದ್ಧಿಗೊಳಿಸುವೆನು' ಎಂದುಕೊಳ್ಳುತ್ತಾ, ನಿರ್ಭೀತನಾಗಿ ರಾಜಗೃಹವನ್ನು ಪ್ರವೇಶಿಸಿದನು. ರೋಷದಿಂದ ಜ್ವಲಿಸುತ್ತಿರುವ ಕಣ್ಣುಗಳಿಂದವನನ್ನು ಬಿರಬಿರನೆ ನೋಡಿದನು. ರಾಜನೆಂದು ತಲೆಬಾಗಲಿಲ್ಲ ವಂದನೆಯ ಲಕ್ಷಣವನ್ನು ತೋರಿಸಲಿಲ್ಲ. 'ನೀನೋ! ಈ ಅನಾಹುತ ಮಾಡಿದವನು?' ಎಂದು ಕೇಳಿದನು. ರಾಜನು ಮಹಾಕೋಪದಿಂದ ವಾಸವನನ್ನು ಸಂಬೋಧಿಸಿ— ನೀನ್ಯಾರು? - 'ಭೂತನಂತೆ ನಿಂತಿರುವೆ? ನಿನ್ನ ವೇಷವೇನು? ಹಣೆಗೆ ಹಚ್ಚಿರುವ ನಾಮವೇನು? ತಾಪಶಾಂತಿಯಾಗಬೇಕೆಂದು ಮಣ್ಣನ್ನು ಬಳಿದುಕೊಂಡಿರುವೆಯೊ? ಕೊರಳಲ್ಲಿ ಕಟ್ಟಿಗೆಯ ಸರವೇಕೆ? ತುಲಸೀ

ಕಾಷ್ಠ ಕಷ್ಟ ಕಟ್ಟಿಗೆಗೂ ಏನು ವ್ಯತ್ಯಾಸ? ಬಾಹುಮೂಲದಲ್ಲಿ ಸುಟ್ಟ ಚಿಹ್ನೆಗಳೇನು? ನಿನಗೆ ವಾತರೋಗವೊ? ತುಲಸೀದಳವನ್ನಿಟ್ಟು ಕೊಳ್ಳಲು ಕರ್ಣರೋಗವೊ? ಈ ಭೂತವೇಷವನ್ನು ಬಿಟ್ಟು ಮಹಾ ದೇವನನ್ನು ಭಜಿಸು. ಭಸ್ಮರುದ್ರಾಕ್ಷ ಸಂಪನ್ನನಾಗಿ ಪಂಚಾಕ್ಷರಿ ಯನ್ನು ಜಪಿಸು. ಶಿವನ ಮೊರೆಹೊಕ್ಕರೆ ನಿನಗೆ ಸದ್ಗತಿಯಾಗುವದು. ಹಾಗಿಲ್ಲದಿದ್ದರೆ ನಿನ್ನನ್ನು ವಧಿಸುವೆನು. ದುರಾಚಾರಿಗಳನ್ನು ಕೊಲ್ಲಿಸು ವದು ರಾಜಧರ್ಮ! ತಿಳಿಯಿತೊ?' ಎಂದನು.

ಈ ಮಾತುಗಳನ್ನು ಕೇಳಿ ವಾಸವನು ಕಿಡಿಕಿಡಿಯಾದನು. ರಾಜನನ್ನು ಸಂಬೋಧಿಸಿ—'ಪಾಷಂಡ! ನಿನಗೆ ಜ್ಞಾನವಿಲ್ಲ. ನೀನು ಪಂಡಿತನಲ್ಲ. ನಿನ್ನಲ್ಲಿ ಪಾಠಕಲಿಯಲು ನಾನು ಬಂದಿಲ್ಲ. ನನ್ನನ್ನು ಶಿಕ್ಷಿಸಿದರೂ ಕೊಂದರೂ ಈ ನನ್ನ ವೇದವಿಹಿತ ವೇಷಭೂಷಣಗಳನ್ನು ಬಿಡುವನಲ್ಲ. ಪ್ರಾಣಹೋದರೂ ಶ್ರೀಹರಿಯನ್ನು ಬಿಟ್ಟು ಅನ್ಯದೇವ ತಾರಾಧನೆ ಮಾಡುವದಿಲ್ಲ. ಯವ್ವನಧನಸಂಪತ್ತಿ ಪ್ರಭುತ್ವಅವಿವೇಕ ಈ ಒಂದೊಂದು ಗುಣವೇ ಅನರ್ಥಕಾರಿಯು. ನಾಲ್ಕೂ ಸೇರಿರುವ ನಿನ್ನ ಮಾತೇನು?' ಎಂದನು.

ವೈಶ್ಯನ ಮಾತು ರಾಜನಿಗೆ ಕರ್ಣಕಠೋರವಾಯಿತು. ದೂತ ರಿಗೆ ಹೇಳಿ ವಾಸವನನ್ನು ರಜ್ಜುಗಳಿಂದ ಬಂಧಿಸಿದನು. ಚೋರಶಾಲೆ ಯಲ್ಲಿಡಿಸಿ ಕಶೆಗಳಿಂದ ಪ್ರಹಾರಮಾಡಿಸಿದನು. ಮತ್ತೆ ದೂತರನ್ನು ಕರೆದು—'ಇನ್ನೂ ಈ ಊರಲ್ಲಿ ಇಂಥಾ ವಿಷ್ಣುಭೂತಗಳಿರುವದರಲ್ಲಿ ಸಂಶಯವಿಲ್ಲ. ಈ ವಿಕಾರವೇಷಧಾರಿಗಳನ್ನು ಹುಡುಕಿ ಹುಡುಕಿ ತಾಡನಮಾಡಿರಿ' ಎಂದು ಆಜ್ಞೆಗೈದನು.

ವಿಷ್ಣುವರ್ಧನನ ವಿಷ್ಣುದ್ವೇಷದ ಪರಮಾವಧಿಯನ್ನು ಶಾಲಂಕಾಯನ ಮುನಿಯು ಮತ್ತೂ ವರ್ಣಿಸುತ್ತಾನೆ:—

# ವಿಷ್ಣುವರ್ಧನನ ಆಜ್ಞೆ

'ಭಟರುಗಳಿರಾ, ವಿಷ್ಣುಭಕ್ತರನ್ನು ಉದ್ಘಾಟನೆಮಾಡಿದವರಿಗೆ ವಲಯುಗಳನ್ನು ಬಹುಮಾನಮಾಡುವೆನು. ಹರಿಮಂದಿರಗಳನ್ನೂ ತುಲಸೀವನಗಳನ್ನೂ ಛೇದಿಸಿದವರಿಗೆ ಕಿರೀಟವನ್ನು ಕೊಡುವೆನು. ಕಮಲಾಕ್ಷನ ಸೇವಾಕೃತ್ಯದಲ್ಲಿ ಆಸಕ್ತರಾದವರನ್ನು ನಿರ್ಮೂಲ ಮಾಡಿದವರಿಗೆ ಕಂಠಿಯನ್ನು ಕೊಡುವೆನು. ಯಾರ ಮುಖದಲ್ಲಿ ವೃತ್ತಿಕೆಯ ಊರ್ಧ್ವಪುಂಡ್ರವಿರುವದೋ ಅವರು ವಿಷ್ಣುಭಕ್ತರು. ಯಾರು ದ್ವಾದಶನಾಮಗಳನ್ನು ಲೇಪಿಸಿಕೊಂಡಿರುವರೋ, ಯಾರ ಬಾಹುಮೂಲದಲ್ಲಿ ಶಂಖ ಚಕ್ರ ಚಿಹ್ನೆಗಳಿರುವುವೋ, ಅವರು ವಿಷ್ಣು ಭೂತಗಳು. ಯಾರು ಕೊರಳಲ್ಲಿ ತುಲಸೀ ಪದ್ಮಾಕ್ಷಮಾಲೆಗಳನ್ನು ಧರಿಸುವರೋ, ಯಾರ ಮನೆಯ ಬಾಗಿಲಿನಲ್ಲಿ ಚಕ್ರ ಚಿನ್ಹೆಯಿರು ವದೋ ಅವರೆಲ್ಲಾ ವಿಷ್ಣುಪಾಷಂಡರು. ಅಂಥವರನ್ನು ಹುಡುಕಿ ದಂಡಿಸತಕ್ಕದ್ದು.'

ರಾಜಾಜ್ಞೆಯಾದಮೇಲೆ ಕೇಳುವದೇನು? ದೂತರು ನಗರ ಶೋಧನೆಗೆ ಹೊರಟರು. ಕಂಡಕಂಡವರನ್ನು ಕೋರಡೆಗಳಿಂದ ಪ್ರಹರಿ ಸಿದರು. ವಿಷ್ಣುದೇವಾಲಯುಗಳ ಮಹಾದ್ವಾರಗಳಿಗೆ ಕಲ್ಲುಮುಳ್ಳುಗ ಳನ್ನೆಳೆದರು. ಜನಗಳ ಹಾಹಾಕಾರ ಧ್ವನಿಯು ಮುಗಿಲು ಮುಟ್ಟಿತು. ಜನರ ರೋದನ ಧ್ವನಿಯನ್ನು ವಿಷ್ಣುವರ್ಧನನು ಕೇಳಿ ನಲಿದಾಡಿ ದನು. ಮೇಲೆ ಮೇಲೆ ದೂತರನ್ನು ಕರೆದು—'ಯೋಧಮುಖ್ಯರೆ, ವಿಷ್ಣುಮತವು ದುಷ್ಟಮತವು ವಿಷ್ಣುಭಕ್ತರು ಶಿವನನ್ನು ಭೂತ ಪ್ರೇತ ಪಿಶಾಚಿಗಳೊಡೆಯನೆಂದು ಕರೆಯುವರು. ಶಿವನು ಲಯಕರ್ತ ನೆಂದೂ ವಿಷ್ಣುದಾಸನೆಂದೂ ನಿಂದಿಸುವರು. ಅಂಥವರೆಂದಿಗೂ ನಮ್ಮ ಶತ್ರುಗಳು. ನಂದಿಯು ವಿಷ್ಣುಭಕ್ತರನ್ನು ಕಣ್ಣಿಂದಲೂ ನೋಡಬಾರ ದೆಂದು ಹೇಳಿದ್ದಾನೆ. ಚಂಡಿಕೇಶ್ವರನು ವಿಷ್ಣುವು ದೂಷ್ಯನೆಂದು ಹೇಳಿ

ದ್ದಾನೆ. ಅನೇಕ ಶಿವಭಕ್ತರು ಯಾವ ಕಾರಣದಿಂದಲೂ ಹರಿಸ್ಮರಣೆ ಮಾಡಬಾರದೆಂತಲೂ, ಹರಿಯ ಹೆಸರಿರುವ ಪಟ್ಟಣಗಳಲ್ಲಿ ವಾಸಮಾಡ ಬಾರದೆಂತಲೂ, ಪಂಚಾಕ್ಷರಿಯ ವಿನಾ ಅನ್ಯ ಮಂತ್ರಗಳನ್ನು ಜಪಿಸಬಾರದೆಂತಲೂ, ವಿಷ್ಣುಧ್ವಂಸವು ಪುಣ್ಯಕರವೆಂತಲೂ, ಶಿವದೀಕ್ಷಾಪರರು ಹರಿಗುಣಕಥನವಾಗುವ ದೇಶದಲ್ಲಿ ನಿಲ್ಲಬಾರದೆಂತಲೂ ವಿಷ್ಣು ಚಿನ್ಹೆಗಳಿಂದ ಪ್ರಕಟಿತವಾಗಿರುವ ಕ್ಷೇತ್ರಗಳನ್ನು ಮನ್ನಿಸಬಾರದೆಂತಲೂ, ಹರಿಕಥಾಶ್ರವಣವೇನಾದರೂ ಪ್ರಮಾದವಶದಿಂದಾದರೆ ಆ ಪಾಪಪರಿಹಾರಾರ್ಥವಾಗಿ ಆ ದಿನ ಉಪವಾಸಮಾಡಬೇಕೆಂತಲೂ ಹೇಳಿದ್ದಾರೆ.

'ಈ ಕಾರಣಗಳಿಂದ ನಾನು ನನ್ನ ರಾಜ್ಯವನ್ನು ವಿಷ್ಣುರಹಿತವಾಗುವಂತೆ ಮಾಡಲು ಪ್ರಯತ್ನಿಸುತ್ತಿದ್ದೇನೆ. ಎಷ್ಟು ಹರಿಮಂದಿರಗಳನ್ನು ನಾಶಮಾಡಿದರೂ ನನ್ನ ರಾಜ್ಯದಲ್ಲಿ ವಿಷ್ಣುಭಕ್ತರು ನಿಶ್ಶೇಷವಾಗಿಲ್ಲ. ಅವರ ಸಂಪೂರ್ಣ ನಾಶವಾಗುವವರೆಗೆ ನನ್ನ ರಾಜ್ಯವು ರಾಜ್ಯವೆನಿಸುವದಿಲ್ಲ. ನನ್ನ ಅನುಯಾಯಿಗಳಾದ ನೀವು ಈ ಕಾರ್ಯದಲ್ಲಿ ನನಗೆ ಸಹಾಯಮಾಡಿದಷ್ಟೂ ನಿಮಗೆ ನನ್ನ ಪ್ರೀತಿಯುಂಟು; ಕೀರ್ತಿಯುಂಟು; ಪರಗತಿಯುಂಟು.'

ರಾಜನ ಉಪದೇಶದಿಂದ ಭಟರಿಗೆ ವೀರಾವೇಶ ಹುಟ್ಟಿತು. ಹಿಂಸಾವಿಹಾರರು ಶೂಲಗಳನ್ನು ಹಿಡಿದುಕೊಂಡು ನಗರ ಪ್ರವೇಶ ಮಾಡಿದರು. ಜಟಾಧಾರಿಗಳಾಗಿ ಹೊರಟವರು ಕೆಲವರು, ಅಸ್ಥಿಮಾಲಾಧಾರಿಗಳಾಗಿ ಹೊರಟವರು ಕೆಲವರು. ಅಗ್ನಿಕುಂಡಧಾರಿಗಳಾಗಿ ಹೊರಟವರು ಕೆಲವರು. ಚರ್ಮಾಂಬರಧರರಾಗಿ ಹೊರಟವರು ಕೆಲವರು. ದಿಗಂಬರರಾಗಿ ಹೊರಟವರು ಕೆಲವರು. ಎತ್ತುಗಳಮೇಲೆ ಸಡಗರದಿಂದ ಹೊರಟವರು ಕೆಲವರು. ಹೀಗೆ ಒಬ್ಬೊಬ್ಬರೂ ಜನರಿಗೆ ದರ್ಶನ ಮಾತ್ರದಿಂದ ಭಯವನ್ನುಂಟುಮಾಡುತ್ತಾ ನಗರವಾಸಿಗ

ಳನ್ನು ವಿಧವಿಧವಾಗಿ ಹಿಂಸೆಗೊಳಿಸಿದರು. ಖಡ್ಗಪಾಣಿಗಳು ಪ್ರಾಣ ಭೀತಿಯಿಂದೋಡುವ ಜನರನ್ನು ಪೂದಲಿಸಿ, ವಿಷ್ಣುತ್ತ್ವರ್ಗಗಳನ್ನು ಪುರಾಣಗಳಲ್ಲಿ ಬರೆದ ವ್ಯಾಸನಗತಿಯೇನಾಯಿತು ಬಲ್ಲಿರೋ? ವೃಷ ಭನು ಆ ವ್ಯಾಸನ ಕಠಿಣ ಬಾಹುಗಳನ್ನು ಕತ್ತರಿಸಿದ ಕಥೆಯನ್ನು ಕೇಳಿರುವಿರೋ? ನಿಮ್ಮ ದುರ್ಮತವನ್ನು ಬಿಟ್ಟು ಮಹಾರಾಜನಿಗೆ ಶರಣಾಗತರಾಗದಿದ್ದರೆ ನಿಮಗೂ ವ್ಯಾಸನಗತಿಯಾಗುವದು ; ನೋಡಿ ರೆಂದು ಖಡ್ಗಗಳನ್ನು ಝಳಪಿಸುತ್ತಾ ನಾಗರಿಕರನ್ನು ಬಳಲಿಸಿದರು.

ದೀಕ್ಷಾವಂತರಾದ ವೈಶ್ಯರನೇಕರು ಈ ಹಾವಳಿಯನ್ನು ನೋಡಿ, ಏನು ಕಾಲಬಂತು? ಮತಮದಾಂಧರು ವ್ಯಾಸನಿಂದೆಯನ್ನು ಮಾಡು ತ್ತಿರುವರಲ್ಲಾ? ಭಗವನ್ನಿಂದೆಯನ್ನು ಕೇಳಬಹುದೆ? ಎಂದು ಕಿವಿ ಗಳನ್ನು ಮುಚ್ಚಿ, ಗುರುಗಳಾದ ಭಾಸ್ಕರಾಚಾರ್ಯರ ಬಳಿಗೆ ಬಂದರು.

ಆಚಾರ್ಯರು ನಗರದಲ್ಲಾಗುತ್ತಿರುವ ಹಾವಳಿಯನ್ನು ಕೇಳಿ ಬಹಳ ಸಂತಾಪಗೊಂಡರು. ಗುಂಪಾಗಿ ಬಂದ ಶಿಷ್ಯರನ್ನು ನೋಡಿ ಅವರಲ್ಲಿ ನವಚೈತನ್ಯವುಂಟಾಯಿತು. ಮಂತ್ರಬಲದಿಂದ ತಕ್ಕ ಪ್ರತಿ ಕ್ರಿಯೆ ಮಾಡಿದಲ್ಲದೆ ಯಾರೂ ಮಹಾದ್ರಿಯಲ್ಲಿ ಜೀವಿಸುವದು ಸಾಧ್ಯ ವಲ್ಲವೆಂದು ತಿಳಿದರು. ಶಿಷ್ಯರನ್ನು ಕರೆದುಕೊಂಡು ಪಟ್ಟಣದ ಮಹಾ ದ್ವಾರದ ಗೋಪುರವನ್ನು ಸೇರಿ ಸುದರ್ಶನ ಮಂತ್ರದಿಂದ ಭೂತೋ ಚ್ಚಾಟನಮಾಡಿ ದಿಗ್ಬಂಧನಮಾಡಿದರು. ಈ ದಿಗ್ಬಂಧನದಿಂದ ರಾಜ ದೂತರು ಮುಗ್ಧರಾದರು. ನಿಂತವರು ನಿಂತಲ್ಲೇ ಆಕಳಿಸುತ್ತಾ ಮಾತಾಡಲು ಬಾಯಿಬರದೆ ಸ್ತಬ್ಧರಾಗಿಹೋದರು. ನಾಗರಿಕರು ನಿರ್ಭೀತರಾಗಿ ರಾಜಭಟರ ಆಯುಧಗಳನ್ನು ಕಿತ್ತುಕೊಂಡರು. ಈ ಸಂಗತಿಯು ವಿಷ್ಣುವರ್ಧನನಿಗೆ ತಿಳಿಯಿತು. ಯಾರೋ ಮಾಂತ್ರಿಕನ ತಂತ್ರದಿಂದ ನಮ್ಮ ಭಟರು ಮುಗ್ಧರಾಗಿರಬೇಕೆಂದವನು ಭಾವಿಸಿ ದನು. ಜಗಜ್ಜಯಮಾಡಿ ಬಂದವನಿಗೆ ವೈಶ್ಯಪಟ್ಟಣದಲ್ಲಿ ಅಪಮಾನ

ವಾಯಿತೆಂಬ ಲಜ್ಜೆ ರಾಜನಿಗಾಯಿತು. ಹೊಸ ಸೈನ್ಯವನ್ನು ಕಳುಹಿ ಸೋಣವೆಂದರೆ ನಗರಪ್ರವೇಶಮಾಡಿದೊಡನೆ ಅವರೂ ಮತ್ತೆಲ್ಲಿ ಮುಗ್ಧರಾಗುವರೋ ಎಂಬ ಭಯವಾಯಿತು. ಒಳ್ಳೆಯದು, ನಾಳೆ ಇದಕ್ಕೆ ತಕ್ಕ ಪ್ರತಿಕ್ರಿಯೆಮಾಡುವೆನೆಂದು ತತ್ಕಾಲದಲ್ಲಿ ತನ್ನವರನ್ನು ಸಮಾಧಾನಗೊಳಿಸಿದನು. ಚಿಂತಾತುರನಾಗಿದ್ದುದರಿಂದ ರಾಜನಿಗೆ ನಿದ್ರೆಬರಲಿಲ್ಲ. ಮರುದಿನ ವೈಶ್ಯರಾರೂ ರಾಜದರ್ಶನಕ್ಕೆ ಬರಲಿಲ್ಲ. ಕೆಲವರು ರಾಜಭೀತಿಯಿಂದ ಗುರುತು ಗೊತ್ತಾಗಬಾರದೆಂದು ಲಲಾಟ ಶೂನ್ಯರಾಗಿ ಸಂಚರಿಸಿದರು. ಕೆಲವರು ರಾಜನ ತೃಪ್ತ್ಯರ್ಥವಾಗಿ ಅವನಿಗೆ ಪ್ರೀತಿಕರವಾದ ಪುಂಡ್ರಗಳನ್ನು ಧರಿಸಿ ಸಂಚರಿಸಿದರು. ಮತ್ತೆ ಕೆಲವರು ಮೃತ್ತಿಕೆಯ ಊರ್ಧ್ವಪುಂಡ್ರವೂ ಬೇಡ, ಭಸ್ಮದ ತಿರ್ಯಕ್ಪುಂಡ್ರವೂ ಬೇಡವೆಂದು ಗಂಧದಿಂದ ವರ್ತುಲಾಕಾರವಾದ ಚಿನ್ಹೆಯನ್ನು ಧರಿಸಿದರು. ಮತ್ತೆ ಕೆಲವರು ವಿಷ್ಣುಪರ ಶಬ್ದಗಳ ನ್ನಾಗಲಿ ಶಿವಪರ ಶಬ್ದಗಳನ್ನಾಗಲಿ ಉಚ್ಚರಿಸದೆ ಉಭಯಸಾಮಾನ್ಯ ವಾದ—ಸುರೇಶ್ವರ, ಮಹಾದೇವ, ಪ್ರಣತಾರ್ತಿಭಂಜನ, ಸ್ವಾಮಿ ಎಂಬದಾಗಿ ದೇವರಸ್ಮರಣೆಮಾಡಿದರು.

[ಮತಛಲವೆಂಬುವದು ಯಾವಾಗಲೂ ಕೆಟ್ಟದ್ದು. ಭರತ ಖಂಡದ ಪುರಾಣಕಾಲವಾಗಲಿ, ಇತಿಹಾಸಕಾಲವಾಗಲಿ, ಮತ ಮದಾಂಧರ ಉಪಟಳದ ಮಯವಾಯಿತಲ್ಲದೆ ಶಾಂತವಾಗಿರಲಿಲ್ಲ. ಎರಡುಸಾವಿರ ವರ್ಷಗಳ ಇತಿಹಾಸವುಳ್ಳ ಪಶ್ಚಿಮದೇಶವು ಮತ ಮದಾಂಧರ ಹಾಡನ್ನೇ ಹಾಡಿತು. ರಕ್ತದಾಹಿಗಳಾದ ಮುಸಲ್ಮಾ ನರ ದಾಹವು ಅವರ ಮತಸ್ಥಾಪನೆಯಾಗಿ ಹದಿಮೂರು ಶತಮಾನ ಗಳಾದರೂ ಅಡಗಲಿಲ್ಲ. ಮತದಂತೆ ನೀತಿ. ನಮ್ಮ ಕಣ್ಣೆದುರಿ ಗಿರುವ ಪುರಾಣಗಳಾಗಲಿ, ಇತಿಹಾಸವಾಗಲಿ, ನೀತಿವಂತರ ಚರಿತ್ರೆ ಗಿಂತ ನೀತಿಬಾಹಿರರ ಚರಿತ್ರೆಗಳಿಂದಲೇ ಭರಿತವಾಗಿವೆ. ರಾಮಾ

ಯಣವು ರಾಮನ ಗುಣವರ್ಣನೆಗಿಂತ ರಾವಣನ ಅವಗುಣವನ್ನು ಅಧಿಕವಾಗಿ ವರ್ಣಿಸಿತು. ಭಾರತವು ಧರ್ಮಾತ್ಮನಾದ ಯುಧಿಷ್ಠಿರನನ್ನು ಬಣ್ಣಿಸುವದಕ್ಕಿಂತ ದುರ್ಯೋಧನನ ಅಧರ್ಮವನ್ನು ಹೆಚ್ಚು ವರ್ಣಿಸಿತು. ಇತಿಹಾಸದ ತುಂಬಾ ಮತದ್ರೋಹಿ ನೀತಿಬಾಹಿರ ರಾಜರ ಕಥೆಯಾಯಿತು. ಬೌದ್ಧಮತ ವೇದಮತಗಳ ಸಂಧಿಕಾಲದಲ್ಲಿ ರಕ್ತದ ಕಾಲುವೆಯು ಹರಿಯಿತು. ಜೈನಶೈವ ಮತಗಳ ಸಂಧಿ ಕಾಲದಲ್ಲಿ ಇದೇ ಗತಿಯಾಯಿತು. ಶೈವವೈಷ್ಣವ ಮತವಿವಾದಕಾಲದಲ್ಲೂ ಸೂಕ್ಷ್ಮಪ್ರಮಾಣದಿಂದ ಭರತಖಂಡವು ಸಮರಾಂಗಣವಾಯಿತು. ಮತಗಳೆಷ್ಟೇ ಇರಲಿ! ಆ ಎಲ್ಲ ಮತಗಳ ಪರಮಧ್ಯೇಯವೇನು? ಸಾಮರಸ್ಯಕ್ಕೆ ಅವುಗಳಲ್ಲಿ ಅವಕಾಶವಿದೆಯೆ? ವ್ಯತ್ಯಾಸಗಳಿದ್ದರೆ ಅವು ಯಾವ ನಿಮಿತ್ತದಿಂದ ಎಷ್ಟಕ್ಕಾಗಿ ಹಾಗಿರಬಹುದು? ಇಷ್ಟೇ ವಿಚಾರ ಹಿಂದೆ ಬರಲಿಲ್ಲ; ವರ್ತಮಾನ ಕಾಲದಲ್ಲಿ ಬರುತ್ತಿಲ್ಲ; ಪ್ರಕೃತ ಪರಿಸ್ಥಿತಿಯನ್ನು ನೋಡಿದರೆ ಶತಮಾನಗಳಾದರೂ ಬರುವಂತಿಲ್ಲ. ಮತವಿವಾದಗಳಿಂದ ಕಷ್ಟನಷ್ಟಗಳಿಗೊಳಗಾಗುವರು ನಿರಪರಾಧಿಗಳು, ದರಿದ್ರರು. ವಿನಾ ಕಾರಣ ಇಂಥವರು ಬಲಿಯಾಗುವರು. ಮತಮದಾಂಧರಿಂದಲೂ ನೀತಿಬಾಹಿರರಿಂದಲೂ ಪ್ರಜಾನಾಶ ದೇಶನಾಶಗಳಾಗುವವು. ಪ್ರಪಂಚವೇ ಶಾಂತವಾಗುವವರಿಗೂ ಪ್ರಪಂಚದಲ್ಲಿ ಶಾಂತಿಹುಟ್ಟುವದಿಲ್ಲವೇನೊ?]



# ನಾಲ್ಕನೇ ಅಧ್ಯಾಯ

೨

ಕುಸುಮಾಂಬೆಯೂ ಕನ್ನಿಕೆಯೂ ಸುಮಗುಪ್ತನಿಗೆ ಪ್ರಾಪ್ತವಾದ ರಾಜದಂಡನೆ ಕಾರಾಗೃಹ ವಾಸಗಳನ್ನು ಕೇಳಿ ಅತ್ಯಂತ ದುಃಖಿತರಾದರು. ಜನಾರ್ದನಸ್ವಾಮಿಗೆ ಆ ದಿನದ ಪುಷ್ಪಸೇವೆ ತಪ್ಪಿಹೋದುದಕ್ಕಾಗಿ ಬಹಳ ವ್ಯಸನಪಟ್ಟರು. ಕನ್ನಿಕೆಯು ತಾಯಿಯನ್ನು ಕುರಿತು—'ಅಮ್ಮಾ, ದುಃಖಿಸಿ ಫಲವೇನು? ನಾನೇ ಮತ್ತೆ ಮಾಲೆಗಳನ್ನು ಕಟ್ಟಿ ಜನಾರ್ದನಸ್ವಾಮಿಗೆ ಸಮರ್ಪಿಸಿ ಬರುವೆನು. ಗುರುಗಳ ಮಂತ್ರಪ್ರಭಾವದಿಂದ ನನಗೆ ರಾಜದೂತರ ಭಯವಾಗುವದಿಲ್ಲ. ರಾಜಭೀತಿಯಿಂದ ನಾನು ವೇಷಭೂಷಣಗಳನ್ನು ಬದಲಾಯಿಸುವಳಲ್ಲ. ರಾಜಭಟರು ನನ್ನನ್ನು ಕೊಲ್ಲಲಿ, ಕತ್ತರಿಸಿ ಭಕ್ಷಣ ಮಾಡಲಿ, ಚಿತ್ರಹಿಂಸೆ ಕೊಡಲಿ, ನಾನು ಬೇರೇ ಪಾಷಂಡ ವೇಷ ಧಾರಿಯಾಗುವದಿಲ್ಲ. ನನ್ನ ಪೂಜಾಕಾರ್ಯಕ್ಕೆ ರಾಜದೂತರು ವಿಘ್ನಕಾರಿಗಳಾದರೆ ಅವರನ್ನು ಧ್ವಂಸಗೊಳಿಸುವೆನು. ಆಕೃತಿಯಿಂದವರನ್ನು ಸಂಮೋಹಗೊಳಿಸುವೆನು. ರಾಜನೇ ಬಂದರೂ ಅವನನ್ನು ಮುಗ್ಧನನ್ನಾಗಿ ಮಾಡುವೆನು. ಅಮೃತ ಮಥನಕಾಲದಲ್ಲಿ ಶ್ರೀಹರಿಯ ಮೋಹಿನೀರೂಪಕ್ಕೆ ಶಿವನು ಮುಗ್ಧನಾಗಲಿಲ್ಲವೇನು?' ಎಂದು ಹೇಳುತ್ತಾ, ದಿವ್ಯಮಾಲೆಗಳನ್ನು ಸ್ವಹಸ್ತದಿಂದ ರಚನೆಮಾಡಿ, ವಸ್ತ್ರದಿಂದ ನಾಸಾಬಂಧನಮಾಡಿಕೊಂಡು, ಮಾಲಾಪೇಟಿಕೆಯನ್ನು ಶಿರಸ್ಸಿನಲ್ಲಿ ಧರಿಸಿ ದೇವಾಲಯವನ್ನು ಕುರಿತು ತೆರಳಿದಳು.

ವೈಶ್ಯವಂಶ ಮಹೋದಧಿಯಲ್ಲವತರಿಸಿದ ಮಹಾಲಕ್ಷ್ಮಿಯೋ ಎಂಬಂತೆ, ವಿನಯಾದಿ ಸದ್ಗುಣಭರಿತಳೂ ವಂಶಪಾವನೆಯೂ ಆಗಿರುವ, ಚಂಚಲವಾದ ಮುಂಗುರುಳುಗಳಿಂದ ವಿರಾಜಿಸುತ್ತಾ ಮಂದಗಮನಮಾಡುತ್ತಿರುವ ಜಲಜಾಕ್ಷಿಯನ್ನು ವಿಷ್ಣುವರ್ಧನನು ದೂರದಿಂದ ಕಂಡು ಮೋಹಿತನಾದನು. ಇವಳೇನು ಅಬ್ಧಿಕನ್ನೆಯೋ ಭವಾನಿಯೋ ಸರಸತಿಯೋ ಶಚಿಯೋ? ಅಸಮಾಕ್ಷನಾದ ಶಂಭುವು ಇವಳನ್ನು ನೋಡಿದರೆ ತನ್ನ ಅರ್ಧಾಂಗಸೌಭಾಗ್ಯವನ್ನು ಪಾರ್ವತಿಗೆ ಕೊಡಲಾರನು. ವಿಷ್ಣುವು ಇವಳನ್ನು ಕಂಡರೆ ವಕ್ಷಸ್ಥಳದಲ್ಲಿ ಲಕ್ಷ್ಮಿಯನ್ನೆಂದಿಗೂ ಧರಿಸನು. ಇವಳನ್ನು ನೋಡದಿರುವದರಿಂದಲೇ ವಿಧಾತನ ವದನದಲ್ಲಿ ವಾಣಿಗೆ ಸ್ಥಾನ ದೊರೆತಿರುವದು. ನಾನು ವಿಸ್ತಾರವಾದ ಪ್ರಪಂಚವನ್ನೆಲ್ಲಾ ಸಂಚರಿಸಿದೆನು. ಇಂತಹ ನಾರೀಮಣಿಯನ್ನುಮಾತ್ರ ಕಾಣಲಿಲ್ಲ. ಲಾವಣ್ಯವೇ ದೇಹಧಾರಣೆಮಾಡಿ ಸ್ವೇಚ್ಛೆಯಾಗಿ ಸಂಚರಿಸುತ್ತಿರುವದೊ? ಇವಳ ದರ್ಶನಮಾತ್ರದಿಂದ ಮುನಿಗಳು ಚಂಚಲರಾಗುವರು; ಮನಸ್ಥೈರ್ಯ ಹೋಗುವದು; ಬ್ರಹ್ಮಚರ್ಯ ನಾಶವಾಗುವದು; ಸ್ವಕಳತ್ರರಲ್ಲಿ ವೈರಾಗ್ಯ ಹುಟ್ಟುವದು. ಇವಳ್ಯಾರಿರಬಹುದು? ಯಾರ ಮಗಳಾಗಿದ್ದರೆ ನನಗೇನು? ಈಗ ಇವಳು ಎಲ್ಲಿ ಹೋಗುತ್ತಿರುವಳು? ಇಲ್ಲಿರುವರಲ್ಲಿ ಈಕೆಯ ವೃತ್ತಾಂತವನ್ನು ಬಲ್ಲವರ್ಯಾರಾದರಿರುವರೆ?

ರಾಜನ ಮಾತನ್ನು ಕೇಳಿ ಸಮೀಪದಲ್ಲಿದ್ದ ನಗರವಾಸಿ ಬ್ರಾಹ್ಮಣರು—'ಮಹಾಪ್ರಭೋ, ಇವಳು ವೈಶ್ಯಕನ್ನಿಕೆ; ಕುಸುಮಗುಪ್ತನ ಮಗಳು; ಪರಮ ವಿಷ್ಣುಭಕ್ತಳು; ಜನಾರ್ದನ ದೇವಾಲಯಕ್ಕೆ ಮಾಲಿಕೆಗಳನ್ನರ್ಪಿಸಲು ಹೋಗುತ್ತಿರುವಳು. ಪುಷ್ಪಗಂಧವನ್ನು ಮೊದಲು ತಾನು ಆಘ್ರಾಣಿಸಬಾರದೆಂಬ ಭಕ್ತಿಯಿಂದ ನಾಸಾಬಂಧನ ಮಾಡಿಕೊಂಡಿರುವಳು. ಬಂಧನದಲ್ಲಿರುವವನೇ ಈಕೆಯ ತಂದೆಯು.

ಅವನು ಕನ್ನಿಕೆಯನ್ನು ವಿಷ್ಣುವಿಗೆ ಸಮರ್ಪಣೆಮಾಡುವೆನೆಂದು ನಿಶ್ಚಯಮಾಡಿರುವನು. ವೈಶ್ಯರನೇಕರು ಕನ್ಯಾರ್ಥಿಗಳಾಗಿ ಸುಮಗುಪ್ತನನ್ನು ಕೇಳಿದರು. ಹಾಗೆ ಕೇಳಿದವರನ್ನು ಸುಮಗುಪ್ತನು ಶಪಿಸಿದನು. ಕನ್ನಿಕೆಯ ಪತಿಯು ಶ್ರೀಜನಾರ್ದನನೆಂದೇ ಹೇಳುತ್ತಾನೆ. ಮನುಷ್ಯರ ಮಾತೆತ್ತಿದರೆ ಆಕೆಯು ಲೋಕಮಾತೆಯೆನ್ನುತ್ತಾನೆ. ಕನ್ನಿಕೆಯು ತುಲಸೀಮೂಲದಲ್ಲಿ ಶುಕ್ರವಾರ ಸಂಧ್ಯಾಕಾಲ ಜನಿಸಿದಳು. ಅದಕ್ಕೆ ತಕ್ಕಂತೆ ಅವಳು ರೂಪ ಯವ್ವನಗಳಿಂದ ಶೋಭಿಸುತ್ತಿರುವಳು. ಕನ್ನಿಕೆಯು ಬಾಲ್ಯಪ್ರಭೃತಿ ವಿಷ್ಣುಕಥೆಗಳನ್ನೇ ಹೇಳುತ್ತಾಳೆ. ಸಖಿಯರಿಗೆ ವಿಷ್ಣುಭಕ್ತಿ ಮಾರ್ಗವನ್ನುಪದೇಶಿಸುತ್ತಾಳೆ. ಫಲವಾಗಲಿ ಪುಷ್ಪವಾಗಲಿ ಏನು ದೊರೆತರೂ ವಿಷ್ಣ್ವರ್ಪಿತ ಮಾಡಿದಲ್ಲದೆ ತಾನು ಸ್ವೀಕರಿಸುವದಿಲ್ಲ. ಇಷ್ಟೇ ಈಕೆಯ ವೃತ್ತಾಂತ'ವೆಂದರು.

ವಿಷ್ಣುವರ್ಧನನು ಬ್ರಾಹ್ಮಣರ ಮುಖದಿಂದ ಕನ್ನಿಕೆಯ ಸಮಾಚಾರ ಕೇಳಿ ಚಿಂತಾಪರನಾದನು. ಕನ್ಯಕಾ ವೃತ್ತಾಂತವು ಮಧುವಿನಲ್ಲಿ ವಿಷಮಿಶ್ರವಾದಂತಾಯಿತು. ಅಮೃತವನ್ನು ಮದ್ಯಭಾಂಡದಲ್ಲಿಟ್ಟಂತಾಯಿತು. ಚೂತಫಲವು ಬೇವಿನಗಿಡದಲ್ಲಿ ಹುಟ್ಟಿದಂತಾಯಿತು. ರತ್ನವು ಕರ್ದಮದಲ್ಲಿದ್ದಂತಾಯಿತು. ಭಂಗಾರವು ಕಬ್ಬಿಣದ ಉದರದಲ್ಲಿ ಜನಿಸಿದಂತಾಯಿತು. ಶಾಸ್ತ್ರವು ಚಂಡಾಲನನ್ನಾಶ್ರಯಿಸಿದಂತಾಯಿತು. ರತಿನೈಪುಣ್ಯವು ವೃದ್ಧಳಲ್ಲಿದ್ದಂತಾಯಿತು. ಶಸ್ತ್ರವು ಬಾಲಕರ ಕೈಲಿದ್ದಂತಾಯಿತು.

ಮತ್ತೆ ರಾಜನು ತನ್ನಲ್ಲಿ ತಾನೆ—ಕನ್ನಿಕೆಯು ವೈಷ್ಣವ ದುರ್ಮತವನ್ನು ತ್ಯಜಿಸಿದರೆ ಶುದ್ಧಳಾಗುವಳು. ಸರ್ವಾಭರಣಭೂಷಿತೆಯಾಗುವಳು. ನನ್ನ ಪರಿಗ್ರಹಕ್ಕೆ ಅರ್ಹಳಾಗುವಳು. ಅವಳು ವೈಷ್ಣವಿಯಾಗಿರುವವರೆಗೆ ಅವಳನ್ನು ನಾನು ಬೇರೇ ನೋಡುವದಿಲ್ಲ. ಆದರೆ

ಮಾಡುವದೇನು? ಕನ್ಯಾಮೋಹವು ನನ್ನನ್ನು ಬಿಡಲೊಲ್ಲದು. ಪ್ರದೋಷಕಾಲವು ಸಂಪ್ರಾಪ್ತವಾಯಿತು. ಈಗ ಶಿವಪೂಜೆಗೆ ಹೋಗಬೇಕು. ಕನ್ಯಾಮೋಹದಿಂದ ಸ್ವಕರ್ಮವನ್ನೂ ತ್ಯಜಿಸಬೇಕಾಯಿತು. ವೈಷ್ಣವಿಯ ದರ್ಶನಜನಿತ ಪಾಪದಿಂದ ನನ್ನಲ್ಲಿ ಇಂಥಾ ದೇವತಾಪಚಾರ ಬುದ್ಧಿ ಹುಟ್ಟಿತೇನು? ನಾನೂ ವಿಷ್ಣುಭಕ್ತನಾಗಿ ಬಿಡಲೆ? ಇಲ್ಲವೇ ಪ್ರಾಣತ್ಯಾಗಮಾಡಿ ಬಿಡಲೆ? ನನ್ನಲ್ಲಿ ಇಂಥಾ ಮೋಹವನ್ನು ಹುಟ್ಟಿಸಬೇಕೆಂದು ಈಶ್ವರ ಸಂಕಲ್ಪವೊ? ಸತ್ಯವಾಗಿ ನಾನು ಶಂಕರ ಭಕ್ತನು. ಶಂಕರನು ಕಂತುಮಾರಕನು. ಶಂಕರನು ಮನ್ಮಥನನ್ನು ದಹಿಸಿದವನಾಗಿದ್ದರೆ ಮತ್ತೆ ನನಗೇಕೆ ಮನ್ಮಥ ಬಾಧೆ? ಶಿವದ್ವೇಷದಿಂದ ಮನ್ಮಥನು ಮತ್ತೆ ಸಾಂಗನಾಗಿ ಬಂದು ನನ್ನನ್ನು ಪೀಡಿಸುತ್ತಿರುವನೆ? ಶಂಕರನು ಮನ್ಮಥನನ್ನು ಸಂಹರಿಸಿದುದೇ ಸತ್ಯವಾಗಿದ್ದರೆ ಅವನು ಮೋಹಿನಿಗೇಕೆ ಮರುಳಾದನು? ತಪಸ್ಸಿನಲ್ಲಿ ಆಸಕ್ತನಾಗಿದ್ದ ರುದ್ರನು ಪಾರ್ವತಿಯ ದರ್ಶನಮಾತ್ರದಿಂದ ತಪಸ್ಸನ್ನು ಬಿಟ್ಟು ಅವಳನ್ನು ಹಿಂಬಾಲಿಸಿದನೇಕೆ? ಪಾರ್ವತಿಯ ಮೋಹದಿಂದ ತನ್ನ ಅರ್ಧಾಂಗದಲ್ಲಿ ಆಕೆಯನ್ನು ಧರಿಸಿದನೇಕೆ? ಅಂಥವನನ್ನು ಭಾವಿಸುವದರಿಂದ ಪ್ರಾಣಿಗಳಿಗೆ ಮೋಹನಾಶವಾಗುವದೆಲ್ಲಿ? ಎಂದು ಪರಿಪರಿಯಾಗಿ ಗಳಹಿದನು.

ಕಾಮಾಂಧನಾದ ವಿಷ್ಣುವರ್ಧನನು ಮನಸ್ಸನ್ನು ಸಮಸ್ಥಿತಿಗೆ ತಂದುಕೊಳ್ಳಲಾರದೆ ಮಂತ್ರಿಗಳನ್ನೂ ವಿಪ್ರೋತ್ತಮರನ್ನೂ ಸಂಬೋಧಿಸಿ - 'ಅಯ್ಯಾ—ಆ ವೈಶ್ಯಪ್ರವರರನ್ನು ಕರೆತನ್ನಿ! ನನಗಾಗಿ ನೀವು ಕನ್ಯಾರ್ಥಿಗಳಾಗಿ ಅವರನ್ನು ಯಾಚಿಸಿರಿ. ಕನ್ಯಾನಿಮಿತ್ತವಾಗಿ ಕೇಳಿದ ಧನವನ್ನು ಕೊಡುವೆನು. ಬೇಡಿದ ರಾಜ್ಯವನ್ನು ಬಿಡುವೆನು. ಕನ್ಯಾಘಟನೆ ಮಾಡಿಕೊಟ್ಟವರಿಗೆ ಬೇಕಾದ ಭೂಮಿಯನ್ನು ಸದಕ್ಷಿಣವಾಗಿ ದಾನಮಾಡುವೆನು. ಕನ್ನಿಕೆಯ ತಂದೆಯನ್ನು ಮೊದಲು ಕರಾ

ಗೃಹದಿಂದ ಬಿಡುಗಡೆಮಾಡಿರಿ. ವೃತ್ತಾಂತವನ್ನರಿಯದೆ ಅವನಿಗೆ ನಾನು ಮಹಾಪರಾಧವಮಾಡಿದೆನು. ಕನ್ಯಕಾ ವೃತ್ತಾಂತವು ಮೊದಲೇ ತಿಳಿದಿದ್ದರೆ ನಾನೆಂದಿಗೂ ವಾಸವನನ್ನು ಬಾಧಿಸುತ್ತಿರಲಿಲ್ಲ. ಅವನನ್ನು ಬಹು ಪ್ರಕಾರವಾಗಿ ಸನ್ಮಾನಿಸುತ್ತಿದ್ದೆನು. ಆ ಕಾಲದಲ್ಲಿ ನೀವ್ಯಾರೂ ನನಗೆ ವೃತ್ತಾಂತವನ್ನು ತಿಳಿಸಲಿಲ್ಲ. ಮಂತ್ರಿಗಳೂ ಬ್ರಾಹ್ಮಣರೂ ರಾಜನಿಗೆ ಯಾವಾಗಲೂ ಹಿತಚಿಂತಕರಾಗಿ ಪೂರ್ವಾಪರಗಳನ್ನು ತಿಳಿಸಬೇಕು. ಹಾಗೆ ಮಾಡದಿರುವದರಿಂದ ನನ್ನ ಶ್ರೇಯೋಭಿಲಾಷಿಗಳೇ ಇಲ್ಲವೆಂದೆಣಿಸಬೇಕಾಯಿತು' ಎಂಬದಾಗಿ ಪ್ರಲಪಿಸಿದನು.

ಮಂತ್ರಿಗಳು ರಾಜನ ಸ್ಥಿತಿಯೂ ಸಮಯವೂ ಸರಿಯಾಗಿಲ್ಲವೆಂದು ಉತ್ತರಕೊಡಲಿಲ್ಲ. ರಾಜಾಜ್ಞೆಯಂತೆ ನಗರಸ್ಥರಾದ ವೈಶ್ಯರನ್ನು ಆಸ್ಥಾನಕ್ಕೆ ಕರೆಸಿದರು. ವಿಷ್ಣುವರ್ಧನನು ಬಂದ ವಣಿಜರನ್ನು ಗೌರವದಿಂದ ಸ್ವಾಗತಮಾಡಿ ದಿವ್ಯಾಸನಗಳಲ್ಲಿ ಕೂಡಿಸಿ ಕೈಜೋಡಿಸಿ ಮಾತಾಡಿದನು.-'ವಣಿಜರೆ! ನೀವು ಬ್ರಹ್ಮಪುತ್ರರು. ಸದಾಚಾರಪರರು. ಸದ್ಧರ್ಮನಿರತರು. ಲೋಕಸ್ಥಿತಿಗೆ ಕಾರಣರು. ಧರ್ಮಾಧರ್ಮವಿವೇಕಜ್ಞರು. ವೈದಿಕಾಚಾರ ತತ್ಪರರು. ನಿಮ್ಮಿಂದಲೇ ನನ್ನ ರಾಜ್ಯ. ನಿಮ್ಮಿಂದ ನನ್ನ ವಿತ್ತಜೀವಿತಗಳು. ಕೃಷಿವಾಣಿಜ್ಯಗೋರಕ್ಷಣ ವೃತ್ತಿಗಳನ್ನು ನಡೆಸುವವರು ನೀವು. ಈ ವೃತ್ತಿಗಳ ಅಭ್ಯುದಯದಿಂದ ರಾಜ್ಯವೃದ್ಧಿಯಾಗುವದು. ಜನಜೀವನವಾಗುವದು. ಇಂತಹ ನಿಮ್ಮ ಬಳಿಯಲ್ಲಿ ನಾನೊಂದು ವರವನ್ನು ಬೇಡುವೆನು. ನನ್ನ ಮನಸ್ಸನ್ನು ನೀವು ಪ್ರಸನ್ನಗೊಳಿಸಬೇಕು. ಸುಮಗುಪ್ತನ ಮಗಳಾದ ಕನ್ನಿಕೆಯನ್ನು ನನಗೆ ಕೊಡಿಸಬೇಕು. ನೀವು ಕೇಳಿದ ದ್ರವ್ಯವನ್ನಾಗಲಿ ರಾಜ್ಯವನ್ನಾಗಲಿ ಕೊಡಲು ಸಿದ್ಧನಿರುವೆನು' ಹೀಗೆಂದು ನುಡಿದನು.

ರಾಜಪಕ್ಷಪಾತಿಗಳೂ, ಸರ್ವೋಪಾಯ ವಿಶಾರದರೂ, ಯುಕ್ತಿವಂತರೂ ಆದ ಬ್ರಾಹ್ಮಣರು ವೈಶ್ಯರನ್ನು ಕುರಿತು,—'ವಣಿಜರೆ! ಲೋಕದಲ್ಲಿ ರಾಜನೇ ಪ್ರತ್ಯಕ್ಷ ದೈವವು. ವಿಷ್ಣ್ವಂಶವಿಲ್ಲದವನೆಂದಿಗೂ ಪೃಥ್ವೀಪತಿಯಾಗನು. ರಾಜಾಜ್ಞೆಯನ್ನು ಪಾಲಿಸುವದರಿಂದ ರಾಜಸೂಯಾದಿ ಯಾಗಫಲ ಬರುವದು. ರಾಜನೇನು ಕೇಳಿದರೂ ರಾಜ್ಯಸ್ಥ ಪ್ರಜೆಗಳು ತತ್‌ಕ್ಷಣ ಕೊಡಬೇಕಾದದು ಧರ್ಮವು. ರಾಜನಿಷ್ಠರು ವಿತ್ತದಿಂದಾಗಲಿ, ಪ್ರಾಣಗಳಿಂದಾಗಲಿ, ರಾಜನನ್ನು ಸಂತೋಷಪಡಿಸಿ ಸದ್ಗತಿಯನ್ನೈದುವರು. ರಾಜನು ತ್ರಿವರ್ಣಗಳಲ್ಲಿ ಸಂಬಂಧ ಬೆಳೆಸಲು ಅಧಿಕಾರಹೊಂದಿರುವನು. ಬ್ರಾಹ್ಮಣನು ಚತುರ್ವರ್ಣಗಳಲ್ಲೂ ವಿವಾಹಮಾಡಿಕೊಳ್ಳಬಹುದು. ವೈಶ್ಯ ಶೂದ್ರರೆಂಬ ದ್ವಿವರ್ಣಗಳಲ್ಲಿ ವೈಶ್ಯನಿಗೆ ವಿವಾಹವಾಗಬಹುದು. ಶೂದ್ರನಿಗಾದರೋ ಸ್ವವರ್ಣದಲ್ಲಿ ವಿವಾಹವಾಗುವದು. ಇದು ಮುನಿಸಮ್ಮತ ಶಾಸ್ತ್ರವಾಗಿರುವದು. ಕನ್ಯಾದಾನ ಮಾಡುವವರು ವರನ ಸಂಪತ್ತು ಕುಲಸೌಂದರ್ಯ ವಯಸ್ಸು ಬಂಧುತ್ವ ಮೊದಲಾದ ಲಕ್ಷಣಗಳನ್ನು ವಿಚಾರಿಸಬೇಕು. ವರನಾಗಿ ನಿಮ್ಮನ್ನು ಯಾಚಿಸುವ ಮಹಾರಾಜನು ಸರ್ವಗುಣ ಸಂಪೂರ್ಣನಾಗಿರುವನು. ಇಂಥಾ ಲಕ್ಷಣ ಸಂಪನ್ನನಾದ ವರನು ನಿಮಗೆ ಹೇಗೆ ಸಿಗಬೇಕು? ವಿಷ್ಣುವರ್ಧನನಿಗೆ ಕನ್ನಿಕೆಯನ್ನು ವಿವಾಹಮಾಡಿಕೊಡುವದರಿಂದ ಆಕೆಯು ಚಕ್ರವರ್ತಿನಿಯಾಗುವಳು. ಆಕೆಯನ್ನು ಸರ್ವರೂ ಸನ್ಮಾನಿಸುವರು. ರಾಜಬಂಧುತ್ವದಿಂದ ನಿಮ್ಮನ್ನು ಜನರು ಪೂಜಿಸುವರು. ಆದುದರಿಂದ ನೀವೆಲ್ಲರೂ ರಾಜಾಜ್ಞೆಯನ್ನು ಪಾಲಿಸುವದು ಶ್ರೇಯಸ್ಕರವೆಂದು ಹೇಳಿದರು.

ವೈಶ್ಯರು ಈ ಮಾತುಗಳನ್ನು ವಿನಯದಿಂದ ಕೇಳಿ ಒಬ್ಬೊಬ್ಬರೊಂದೊಂದು ಪರಿಯಾಗಿ ನಿರ್ದೇಶವಿಲ್ಲದ ಉತ್ತರಕೊಟ್ಟರು. ಖಂಡಿತವಾದಿಗಳು ರೂಢಿಯಲ್ಲಿ ಮಿಶ್ರವಿವಾಹ ಪದ್ಧತಿಯು ಕಂಡುಬರದಿರು

ವದರಿಂದ ನಮಗೆ ಈ ಪ್ರಶ್ನೆಗೆ ಉತ್ತರವೀಯುವದು ಶಕ್ಯವಲ್ಲವೆಂದರು. ದಾಕ್ಷಿಣ್ಯಪರರು—ಕಠಿಣೋಕ್ತಿಗಳಿಂದ ಫಲವಿಲ್ಲವೆಂದು, ವಿಚಾರಿಸೋಣ! ಕನ್ಯಾಪಿತನು ಬಂಧನದಲ್ಲಿರುವಾಗ ನಾವು ಮಾತಾಡುವದು ಯುಕ್ತವಲ್ಲ. ನಿಷ್ಕಾರಣವಾಗಿ ಸುಮುಗುಪ್ತನು ಅವಮಾನಿತನಾದನು. ರಾಜದೂತರು ಅವನ ವಯೋಗೌರವವನ್ನೂ ಗಣಿಸದೆ ಕಶೆಗಳಿಂದ ಪ್ರಹಾರಮಾಡಿದ್ದಾರೆ ಅವನು ಹರಿದರ್ಶನವಿಲ್ಲದೆ ಮಾಲಿಕೆಗಳನ್ನರ್ಪಿಸದೆ ಜಲಪಾನಮಾಡುವನಲ್ಲ. ಮೊದಲು ಅವನ ಬಂಧವಿಮೋಚನೆಯಾಗಲಿ. ಮಹಾರಾಜನು ಅವನ ಪ್ರಸನ್ನತೆಯನ್ನು ಪಡೆಯಲಿ. ನಾವೂ ನಮ್ಮಿಂದಾದ ಸಾಹಸಮಾಡುವೆವೆಂದು ಹೇಳಿದರು. ಉಪಾಯಕೋವಿದರು,—ಸುಮುಗುಪ್ತನ ಬಂಧವಿಮೋಚನೆಗೆ ಒಳ್ಳೇ ಉಪಾಯ ಸಿಕ್ಕಿತೆಂದರು; ವಾಸವೀಮೋಹಮದಾಂಧನಾದ ನೃಪನು ಈ ಸಮಯದಲ್ಲಿ ನಾವು ಜನಾರ್ದನ ದೇವಾಲಯವನ್ನು ಶುದ್ಧಿಗೊಳಿಸಿ ಭೇರೀಮೃದಂಗಾದಿ ವಾದ್ಯವೈಭವದಿಂದ ದೇವತಾರಾಧನೆ ಮಾಡಿದರೂ, ರಾಜನ ಕಿವಿಗೆ ಬೀಳುವಂತೆ ಹರಿಭಜನೆ ಮಾಡಿದರೂ ಏನೂ ಮಾಡಲಾರನೆಂದಂದುಕೊಂಡರು. ಆಸ್ಥಾನದಿಂದ ಹೊರಡುವದೇ ತಡ, ಸುಮುಗುಪ್ತನನ್ನು ಚೋರಶಾಲೆಯಿಂದ ಬಿಡುವದೇ ತಡ, ನಾವು ದೇವರ ಉತ್ಸವವನ್ನು ಮಾಡೋಣ; ಭಗವತ್ಪೂಜೆಗೆ ವಿಘ್ನ ಬಂದುದರಿಂದಲೂ ರಾಜದೂತರ ಹಾವಳಿಯಿಂದಲೂ ಉಪವಾಸಮಾಡುತ್ತಿರುವ ನಗರಸ್ಥ ಜನರಿಗೆ ಪಾರಣೆಯನ್ನು ಮಾಡಿಸೋಣವೆಂದು ನಿಶ್ಚಯಮಾಡಿಕೊಂಡರು. ರಾಜನಿಗೆ ತತ್ಕಾಲದಲ್ಲಿ ಮುಖೋಲ್ಲಾಸಕವಾದ ಮಾತುಗಳಿಂದ ತಾನು ಮುಂದರಿದುಮಾಡಿದ ಕಾರ್ಯವು ಅತ್ಯಾಚಾರವಾಯಿತೆಂದು ಪಶ್ಚಾತ್ತಾಪ ಹುಟ್ಟುವಂತೆ ಮಾಡಿದರು.

ಅನಂತರ ಸುಮುಗುಪ್ತನನ್ನು ಮರ್ಯಾದೆಯಿಂದ ಸಮುಖಕ್ಕೆ ಕರೆತರುವಂತೆ ರಾಜಾಜ್ಞೆಯಾಯಿತು. ದೂತರು ರಜ್ಜುಬಂಧನದಿಂ

ದವನನ್ನು ಬಿಡಿಸಿ ರಾಜನೆದುರಿಗೆ ನಿಲ್ಲಿಸಿದರು. ರಾಜನು ಒಡನೆಯೇ ಸಿಂಹಾಸನದಿಂದೆದ್ದು ಸುಮಗುಪ್ತನಿಗೆ ದಂಡಪ್ರಣಾಮಮಾಡಿದನು. ಇದರಿಂದ ಗುಪ್ತನ ಮನಸ್ಸು ಚಲಿಸಲಿಲ್ಲ. ಗೌರವ ವಾಕ್ಯಗಳಿಂದ ಹಾಸವನನ್ನು ವಶಪಡಿಸಿಕೊಳ್ಳಬೇಕೆಂದು, - 'ಆರ್ಯಾ—ನಿನ್ನ ವೃತ್ತಾಂತವನ್ನು ತಿಳಿಯದೆ ನಿನಗೆ ಅಪರಾಧಮಾಡಿದೆನು. ಕನ್ನಿಕೆಯ ತಂದೆ ನೀನೆಂಬುದು ತಿಳಿದಿದ್ದರೆ ನಿನಗಿಂಥಾ ದಂಡನೆಯಾಗುತ್ತಿರಲಿಲ್ಲ. ನೀನಾದರೋ, ಬ್ರಹ್ಮನಿಷ್ಠನಾಗಿರುವೆ. ಸದಾ ಸಮಾಚೀನ ಕರ್ಮಗಳನ್ನೆಸಗುತ್ತಿರುವೆ. ಮೌಢ್ಯದಿಂದ ಮಾಡಿದ ಮಹಾಪರಾಧವನ್ನು ಕ್ಷಮಿಸು. ಕನ್ನಿಕೆಯನ್ನು ನನಗೆ ವಿವಾಹಮಾಡಿಕೊಡು' ಎಂದು ಕೇಳಿದನು. ರಾಜಭಟರೂ ರಾಜಾನುಯಾಯಿ ಬ್ರಾಹ್ಮಣರೂ ರಾಜನ ಗುಣಕಥನಮಾಡಿದರು. ಈ ತೆರದ ಸಾಮದಾನೋಪಾಯಗಳು ಸುಮಗುಪ್ತನನ್ನು ಮರಳುಮಾಡಲಿಲ್ಲ. ಯಾರನ್ನೂ ಯಾರ ಮಾತನ್ನೂ ಗುಪ್ತನು ಲಕ್ಷ್ಯಕ್ಕೆ ತರಲಿಲ್ಲ. ಪ್ರತ್ಯುತ್ತರವಾಗಿ— 'ಇದೇನು ಲೋಕವಿರುದ್ಧ ಧರ್ಮಶಾಸ್ತ್ರಗರ್ಹಿತ ಮಾತುಗಳು? ರಾಜರು ಎಂದಿದ್ದರೂ ವಿವೇಕಶೂನ್ಯರು. ಅವರ ಮಾತಿಗೆ ನಾನು ದುಃಖಿಸುವದಿಲ್ಲ. ಶಾಸ್ತ್ರವೇತ್ತರಾದ ಬ್ರಾಹ್ಮಣರ ಮುಖದಿಂದ ಇಂಥಾ ನರಕದ ಮಾತುಗಳು ಬರಬಹುದೆ? ಕಲಿಯುಗದಲ್ಲಿ ಮಿಶ್ರ ವಿವಾಹವಾಗಕೂಡದೆಂದು ಯಾಜ್ಞವಲ್ಕ್ಯ ಸ್ಮೃತಿಯಿರುವದಾದರೂ ಆಸ್ಥಾನ ಪಂಡಿತರಿಗೆ ತಿಳಿಯದೆ? ನಾನು ಧನದಾಶೆಯುವನಲ್ಲ. ನನಗೆ ರಾಜ್ಯಲೋಭವಿಲ್ಲ. ನನಗಿದ್ದ ಗೃಹಕ್ಷೇತ್ರ ವಿತ್ತ ಮೊದಲಾದ ಸರ್ವಸ್ವವನ್ನೂ ತ್ಯಾಗಮಾಡಿ ಪುಷ್ಪವನದಲ್ಲಿರುವೆನು. ನನ್ನ ಆಶೆಯೇನಿದ್ದರೂ ಸ್ವಾಮಿಗೆ ಪುಷ್ಪಕೈಂಕರ್ಯಮಾಡುವದರಲ್ಲಿರುವದು. ಹರಿದಾಸ್ಯದ ವಿನಾ ಮತ್ತೊಂದು ನನಗೆ ರುಚಿಸುವದಿಲ್ಲ. ವೈಶ್ಯ ಕನ್ಯೆಯನ್ನು ಪರಿಗ್ರಹಿಸಲು ರಾಜನು ಅರ್ಹನಲ್ಲ. ಕನ್ನಿಕೆಯು ಸಾಮಾನ್ಯ ಮರ್ತ್ಯಳಲ್ಲ. ತುಲಸೀಮೂಲ ಸಂಭೂತಳು. ಕ್ರೀಡೆ

ಯಿಂದಲೂ ರೂಪದಿಂದಲೂ ಲಕ್ಷ್ಮೀಸದೃಶಳು. ಅವಳನ್ನು ಶ್ರೀಹರಿಗೆ ಸಮರ್ಪಣೆಮಾಡಿರುವೆನು. ಸರ್ವರ ಜನನಿಯು ರಾಜನಿಗೂ ಜನನಿಯೇ. ಸಾಮಾನ್ಯವಾಗಿ ವಿಷ್ಣುಭಕ್ತನಲ್ಲದವನಿಗೆ ಕನ್ಯಾದಾನ ಮಾಡುವದು ನಮ್ಮ ಕುಲಸಂಪ್ರದಾಯವಾಗಿಲ್ಲ. ರಾಜನು ವಿಷ್ಣು ದ್ವೇಷಿ. ನಮ್ಮ ಕುಲದ್ವೇಷಿ. ಶಾಸ್ತ್ರದ್ವೇಷಿ. ನನ್ನನ್ನು ಮತ್ತೆ ಬೇಕಾದರೆ ಬಂಧನದಲ್ಲಿಡಲಿ. ನನ್ನನ್ನು ಕತ್ತರಿಸಲಿ. ರಾಜಾಜ್ಞೆಯನ್ನು ನಾನು ಮನ್ನಿಸುವನಲ್ಲ. ಅವನಿಗೆ ಮಗಳನ್ನು ಕೊಡುವನಲ್ಲ' ಎಂಬದಾಗಿ ಹೇಳಿದನು.

ವಿಷ್ಣುವರ್ಧನನಿಗೆ ಸುಮಗುಪ್ತನ ಮಾತು ಕರ್ಣಕಠೋರವಾಯಿತು. ಖಡ್ಗವನ್ನು ವರೆಯಿಂದ ಹಿರಿದನು. ವಾಸವನನ್ನೂ ಅವನ ಅನುಯಾಯಿಗಳನ್ನೂ ಸಂಹರಿಸುವೆನೆಂದು ಹುಂಕರಿಸಿದನು. ರಾಕ್ಷಸ ವಿವಾಹಪದ್ಧತಿಯಂತೆ ಕನ್ನಿಕೆಯನ್ನಪಹರಿಸಿ ಲಗ್ನಮಾಡಿಕೊಳ್ಳುವೆನೆಂದು ಶಪಥಮಾಡಿದನು. ನಗರವನ್ನು ನಿರ್ಮೂಲಮಾಡುವೆನೆಂದು ಸಿಂಹನಾದಗೈದನು. ಸೈನಿಕವೀರರು ಖಡ್ಗಗಳನ್ನು ಝಳಪಿಸಿದರು.

ರಾಜಗರ್ಜನೆಯನ್ನು ಕೇಳಿ ವೈಶ್ಯರು ಭೀತರಾದರು. ತತ್ಕಾಲದಲ್ಲಿ ಪ್ರಾಪ್ತವಾದ ವಿಪತ್ತಿವಾರಣೋಪಾಯವನ್ನು ಚಿಂತಿಸಿದರು. ನಾವೇ ಸಕಲ ಯಾಜಮಾನ್ಯವನ್ನೂ ವಹಿಸಿ ಕನ್ನಿಕೆಯನ್ನು ಕೊಡುವೆವೆಂದು ವಾಗ್ದಾನಮಾಡೋಣವೆ? ಸುಮಗುಪ್ತನು ಪ್ರಸನ್ನನಾಗದಿದ್ದರೆ ಸುಂದರಿಯಾದ ವಾರಕನ್ನಿಕೆಯನ್ನಲಂಕರಿಸಿ ಅವಳೇ ಕನ್ನಿಕೆಯೆಂದು ಹೇಳೋಣವೆ? ಮೌಹೂರ್ತಿಕರಿಗೆ ದ್ರವ್ಯವನ್ನು ಕೊಟ್ಟು ಲಗ್ನಕಾಲವಿನ್ನೂ ದೊರೆತಿಲ್ಲವೆಂದು ಕಾಲಹರಣಮಾಡೋಣವೆ? ತತ್ಕಾಲದಲ್ಲಿ ಹೇಗಾದರೂ ಮಾಡಿ ರಾಜನನ್ನು ಕಳುಹಿಸಿ ಸ್ವಲ್ಪಕಾಲಾ

ನಂತರ ಕನ್ನಿಕೆಯು ಮೃತಳಾದಳೆಂದು ಸುದ್ದಿಯನ್ನು ಕಳುಹಿಸೋಣವೆ? ಏನು ಮಾಡೋಣವೆಂದು ವಿಚಾರಪರರಾದರು.

ಮತ್ತೆ ತಮ್ಮಲ್ಲಿ ತಾವೇ—ಈಗ ರಾಜನು ಏಕಾಂಗಿಯಾಗಿ ಬಂದಿರುವನು. ಪಟ್ಟಣವನ್ನು ಬಿಟ್ಟು ಬಲು ಕಾಲವಾಗಿರುವದು. ಆದ್ದರಿಂದ ಇಷ್ಟು ಕಾಮುಕನಾಗಿರುವನು. ರಾಣಿವಾಸವನ್ನು ಸೇರಿದ ಮೇಲೆ ಅವರ ವ್ಯಾಮೋಹದಲ್ಲಿ ಕನ್ನಿಕೆಯನ್ನು ಮರೆತರೂ ಮರೆಯಬಹುದು. ರಾಜರ ಬುದ್ಧಿಯೂ ಬಾಲಕರ ಬುದ್ಧಿಯೂ ಮರ್ಕಟಬುದ್ಧಿಯಂತೆ ಚಂಚಲವು. ಸಮಯವರಿತು ಮಂತ್ರಿಗಳಾಗಲಿ ಬ್ರಾಹ್ಮಣರಾಗಲಿ ಮಿಶ್ರವಿವಾಹವು ಶಾಸ್ತ್ರನಿಷಿದ್ಧವೆಂದು ರಾಜನಿಗೆ ವಿವೇಕ ಬೋಧನೆಮಾಡಬಹುದು. ಮರ್ಕಟಬುದ್ಧಿಯ ರಾಜನು ಕನ್ನಿಕೆಯಲ್ಲಿ ಮೋಹಗೊಂಡಂತೆ ಮತ್ತಾವ ಸುಂದರಿಯನ್ನಾದರೂ ನೋಡಿ ಮೋಹಿತನಾಗಬಹುದು. ಆಗ ಕನ್ನಿಕೆಯನ್ನು ಮರೆಯಬಹುದು. ದೇಹವು ಅನಿತ್ಯವು. ಬುದ್ಧಿಯು ಅತಿ ಚಂಚಲವು. ರಾಜನಿಗೆ ಶತ್ರುಗಳೇ ಬಹಳ. ಪರರಾಯರಿಂದ ರಾಜನು ಪರಾಜಿತನಾದರೆ ಅಥವ ಮೃತನಾದರೆ ನಮ್ಮ ದುಃಖವೇ ಪರಿಹಾರವಾಗುವದು. ರಾಜನ ನಾಶಕ್ಕೆ ಈಗ ಮಾಡಿರುವ ಭಗವದ್ಭಾಗವತಾಪಚಾರವೇ ಸಾಕಾಗಿರುವದು. ಆಪನ್ನಿವಾರಣೆಗಾಗಿ ಅನೃತವಾಡಿದರೆ ಅದು ಪಾಪವಲ್ಲ. ವಿವಾಹದಲ್ಲೂ ಗೋಬ್ರಾಹ್ಮಣ ರಕ್ಷಣೆಯಲ್ಲೂ ಧರ್ಮರಕ್ಷಣೆಯಲ್ಲೂ ಅನೃತವಾಡಿದರೆ ಪಾಪವಿಲ್ಲ. ಈ ಸಮಯದಲ್ಲಿ ಆಶಾಜನಕ ವಾಕ್ಯಗಳಿಂದ ನೃಪಾಧಮನನ್ನು ವಂಚಿಸೋಣ! ಅವನಿಂದ ಇದೇ ನೆವನದಲ್ಲಿ ಧನಸಂಗ್ರಹ ಮಾಡೋಣ! ಎಂದು ಮೊದಲಾಗಿ ನಿಶ್ಚಯಿಸಿ ನೇತ್ರಸಂಜ್ಞೆಯಿಂದ ಮೆಲ್ಲನೆ ಸುಮಗುಪ್ತನನ್ನು ಆ ಸ್ಥಳದಿಂದ ಹೊರಡಿಸಿದರು ಕುಪಿತನಾದ ರಾಜನಬಳಿಗೆ ದೈನ್ಯಮುದ್ರೆಯಿಂದ ಬಂದು ನಮಸ್ಕರಿಸಿದರು.

'ಮಹಾಪ್ರಭೋ! ಅಜ್ಞಾನಿಗಳ ಮಾತಿಗೆ ತಾವು ಸಿಟ್ಟಾಗಬಾರದು. ಕುಸುಮಗುಪ್ತನು ಮಹಾಮೂರ್ಖನು. ಸಾಮದಾನೋಪಾಯಗಳಿಂದಲೇ ಅವನನ್ನು ಪ್ರಸನ್ನೀಕರಿಸಿಕೊಳ್ಳಬೇಕು. ಶಾಂತಿಯಿಂದ ಕಾರ್ಯಸಾಧನೆಯಾಗಬಹುದು. ಶಾಂತರೂ ಬುದ್ಧಿವಂತರೂ ಸಾಮವಾದಿಗಳೂ ಸಾಧ್ಯವಾಗದ ಕಾರ್ಯವನ್ನಾದರೂ ಸಾಧಿಸಬಲ್ಲರು. ರೋಷದಿಂದ ತ್ವರಿತ ಬುದ್ಧಿಯುಳ್ಳವರು ಸಿದ್ಧವಾದುದನ್ನೂ ಅಸಾಧ್ಯ ಮಾಡಿಕೊಳ್ಳುವರು. ಕೋಪದಿಂದ ಯುದ್ಧ ಮಾಡಿದರೆ ಬಹುಜನರು ಸಾಯುವರು. ಜಯಾಪಜಯಗಳನ್ನು ನಿರ್ಣಯಿಸಲು ಸಾಧ್ಯವಲ್ಲ. ವೈಶ್ಯರ ಸಂಹಾರದಿಂದ ನಿನಗೆ ಬರುವ ಯಶಸ್ಸೇನು? ಪುಣ್ಯವಾವುದು? ಒಂದುವೇಳೆ ಕನ್ಯಾಪಿತನೇ ಮೃತನಾದರೆ ಕನ್ನಿಕೆಯು ದುಃಖಿತಳಾಗುವಳು. ದುಃಖಸಂತಪ್ತಳ ವಿವಾಹದಿಂದ ನಿನಗೇನು ಸುಖವಾಗುವದು? ಲೋಕದಲ್ಲಿ ಶೃಂಗಾರಭಾವಗಳನ್ನರಿತವರು ಕಾಂತೆಯರ ಬಂಧುಗಳನ್ನು ಸಂತೋಷಬಡಿಸುವರು ಒಳ್ಳೇಮಾತಿನಿಂದ ಕಾಂತೆಯರ ಪ್ರೀತಿಯನ್ನು ಸಂಪಾದಿಸುವರು. ಪ್ರೀತಳಾದ ಕಾಂತೆಯು ತನ್ನ ಹಾವಭಾವಗಳಿಂದಲೂ ಶೃಂಗಾರಚೇಷ್ಟೆಗಳಿಂದಲೂ ಪತಿಯನ್ನು ಸಂತೋಷಪಡಿಸುವಳು. ಯುದ್ಧಮಾಡಿದರೆ ಜನರೆಲ್ಲರೂ ನಿನ್ನ ಶತ್ರುರಾಜ್ಯಕ್ಕೆ ಪಲಾಯನಮಾಡುವರು. ದೇಶವು ಪ್ರಜಾಹೀನವಾಗುವದು. ಅಪಕೀರ್ತಿಬರುವದು. ಬಂಧನಾಶನಿಂದ ಕನ್ನಿಕೆಯೇ ಮೃತಳಾದರೆ ಮಾಡುವದೇನು? ವೈಶ್ಯರಿಂದ ನೀನೇ ಪರಾಜಿತನಾದರೆ ಕ್ಷತ್ರಿಯ ಕುಲಕ್ಕೆ ಶಾಶ್ವತವಾದ ಅಪಕೀರ್ತಿಬರುವದು ವೈಶ್ಯರ ಪಟ್ಟಣದಲ್ಲಿ ಸೈನ್ಯಕ್ಕೆ ಅಭಾವವಿಲ್ಲ. ವೃಥಾ ಲೋಕದ್ವಯನಾಶಕವಾದ ಕರ್ಮದಲ್ಲುದ್ಯುಕ್ತನಾಗಬೇಡ. ಕೋಪವನ್ನು ಬಿಡು. ಕನ್ಯಾಪ್ರಾಪ್ತಿಗೆ ತಕ್ಕ ಮಾರ್ಗವನ್ನು ನಾವೇ ತಿಳಿಸಿಕೊಡುವೆವು. ಎಲ್ಲಕ್ಕೂ ಮೊದಲು ಬಹಿರಂಗದಲ್ಲಾದರೂ ವಿಷ್ಣುದ್ವೇಷವನ್ನು ಬಿಡು. ವೈಶ್ಯರೆಲ್ಲರೂ ಭಾಸ್ಕರಾಚಾರ್ಯರ ಶಿಷ್ಯರಾಗಿರುವರು. ಅವರ ಮಂತ್ರಶಕ್ತಿ

ಯೇನಿರುವದೆಂಬುವುದು ನಿನಗೂ ಅನುಭವಕ್ಕೆ ಬಂದಿದೆಯಷ್ಟೆ! ಅವರನ್ನು ಮೊದಲು ಪ್ರಸನ್ನೀಕರಿಸಿಕೊ. ಸುಮಗುಪ್ತನು ಭಾಸ್ಕರಾಚಾರ್ಯರ ಪರಮಶಿಷ್ಯನು. ಆಚಾರ್ಯರು ಹೇಳಿದಂತೆ ಎಲ್ಲರೂ ಕೇಳುವರು. ಜನಾರ್ದನ ದೇವಾಲಯವನ್ನು ಶೃಂಗರಿಸುವದರಿಂದ ಆಚಾರ್ಯರಿಗೂ ಸುಮಗುಪ್ತನಿಗೂ ಸಂತೋಷವಾಗುವದು. ಲೋಕಸಂಗ್ರಹಾಪೇಕ್ಷೆಯಿಂದಾದರೂ ಹರಿನಾಮೋಚ್ಚಾರಣೆಮಾಡು. ಸುಮಗುಪ್ತನು ವಶನಾಗುವದು ಹರಿನಾಮವೊಂದಕ್ಕೇ! ನಾವಾದರೂ ಸಮಯವರಿತು ಸುಮಗುಪ್ತನಿಗೆ ಬೋಧಿಸುವೆವು. ಕನ್ನಿಕೆಯನ್ನು ನಿನಗೆ ಕೊಡುವಂತೆ ಮಾಡುವೆವು. ವಿವಾಹವು ಒಂದೆರಡು ದಿನದ ಸಂಬಂಧವಲ್ಲ. ಮೂಢನಾದರೂ ವಿವಾಹಸಂಬಂಧವು ಸುಸ್ಥಿರವಾಗುವವರೆಗೆ ತನ್ನ ಸಂಕಲ್ಪವನ್ನು ಯಾರಿಗೂ ತಿಳಿಸುವದಿಲ್ಲ. ಯಾವ ಪುರುಷನನ್ನಾದರೂ ನಾರಿಯು ಮೋಹಿಸಿದರೆ, ಅವಳು ತಾನಾಗಿಬಂದು ನಿನಗೆ ಮೋಹಿತಳಾಗಿರುವೆನೆಂದು ಹೇಳುವದಿಲ್ಲ. ವಿವಾಹ ಸಂಬಂಧದಲ್ಲಿ ವರನಾಗಲಿ ಕನ್ಯಾಪಿತೃಗಳಾಗಲಿ ಪ್ರತ್ಯಕ್ಷ ಮಾತನಾಡುವದು ಸಂಪ್ರದಾಯವಲ್ಲ. ಈ ಕಾರ್ಯವನ್ನು ಬಂಧುಗಳು ನಿಂತು ನಡೆಸಬೇಕಾದ್ದು. ನೀನು ಕವಕವ ಪಡಬೇಡ. ಶಾಸ್ತ್ರಮರ್ಯಾದೆಯನ್ನನುಸರಿಸಿ ನಾವಾದರೂ ಕಾರ್ಯಮಾಡುವೆವು. ಸುಮಗುಪ್ತನನ್ನು ವೈಷ್ಣವ ವೇಷದಿಂದಲೇ ಗೆಲಿಯಬೇಕು. ಯುಕ್ತಾಯುಕ್ತ ವಾಕ್ಯಗಳಿಂದ ವಿದ್ವಾಂಸನು ವಶನಾಗುವನು. ಮೂರ್ಖನನ್ನು ಅವನ ದಾರಿಯಲ್ಲೇ ಹೋಗಿ ಸ್ವಾಧೀನಮಾಡಿಕೊಳ್ಳಬೇಕು. ಕಾಂತೆಯರನ್ನು ಶೃಂಗಾರ ಕಥೆಗಳಿಂದ ಒಲಿಸಬೇಕು. ಹೀಗೆ ನಡೆಯುವದರಿಂದ ಕಾರ್ಯಸಿದ್ಧಿಯಾಗುವದು.'

ಉಪಾಯಕೋವಿದರಾದ ವೈಶ್ಯರ ಮಾತಿನಿಂದ ರಾಜನು ಸಂತುಷ್ಟನಾದನು. ವೈಶ್ಯಪ್ರಮುಖರನ್ನು ರತ್ನಾಭರಣಗಳಿಂದಲೂ

ಮುಕ್ತಾಹಾರಗಳಿಂದಲೂ ಸನ್ಮಾನಿಸಿದನು. ನಿಮ್ಮ ಪ್ರಾರ್ಥನಂತೆ ಆ ಭಾಸ್ಕರಾಚಾರ್ಯರಿಗೂ ಬಹುಮಾನ ಮಾಡುವೆನು; ಅವರನ್ನು ಕರೆದುಕೊಂಡು ಬನ್ನಿರೆಂದು ಹೇಳಿದನು.

ವಣಿಜರು,-'ಮಹಾರಾಜ! ನಿನ್ನ ಭಟರ ಅತ್ಯಾಚಾರಗಳಿಂದವರು ಬೇಸರಗೊಂಡು ನಗರಗೋಪುರದಲ್ಲೋ ವನಾಂತರದಲ್ಲೋ ಇರುವರು. ಅವರನ್ನು ನಾವು ಕರೆತರುವದುಚಿತವಲ್ಲ. ಆ ಕಾರ್ಯವನ್ನು ನಿಮ್ಮ ಮಂತ್ರಿಮುಖ್ಯರು ಮಾಡಬೇಕು. ನಮಗಪ್ಪಣೆಯಿತ್ತರೆ ನಮ್ಮ ಮನೆಗಳಿಗೆ ತೆರಳುವೆವು' ಎಂದು ರಾಜನಿಗೆ ನಮಸ್ಕರಿಸಿದರು. ರಾಜನು-'ಬಾಂಧವರೆ, ಈ ಕಾರ್ಯವನ್ನು ನಿಮ್ಮ ಕಾರ್ಯವೆಂಬ ಅಭಿಮಾನದಿಂದ ನೆರವೇರಿಸುವಿರಷ್ಟೆ?' ವಣಿಜರು—'ಪ್ರಭೋ! ನಮ್ಮ ಕಾರ್ಯವನ್ನು ನಾವು ಮಾಡುವೆವು. ಹೆಚ್ಚು ಹೇಳಬೇಕಾದುದೇನಿಲ್ಲ' ಎಂದು ರಾಜಗೃಹದಿಂದ ಪ್ರಯಾಣಮಾಡಿದರು.—



# ನಾಲ್ಕನೆಯ ಅಧ್ಯಾಯ



೧

**ಸುಮಗುಪ್ತನು** ದೈವದ್ರೋಹಿಯ ದರ್ಶನಸ್ಪರ್ಶಗಳಿಂದ ಅಪವಿತ್ರನಾದೆನೆಂದು ಸ್ವಗೃಹಕ್ಕೆ ಬಂದು, ಗೋಮಯ ಸ್ನಾನದಿಂದ ಶುದ್ಧನಾದನು. ಬಂಧನದಲ್ಲಿದ್ದುದರಿಂದ ಸಂಧ್ಯಾದಿಕರ್ಮಗಳು ಲೋಪವಾದುದಕ್ಕೆ ಸಂತಪ್ತನಾಗಿ ನೂತನ ಯಜ್ಞೋಪವೀತವನ್ನು ಧರಿಸಿ, ಸಂಧ್ಯೆಯನ್ನಾಚರಿಸಿ ತುಲಸೀವನದಲ್ಲಿ ವಿಶ್ರಮಿಸಿಕೊಂಡನು. ದೇವಾಲಯಕ್ಕೆ ಹೋಗಿದ್ದ ಕನ್ನಿಕೆಯು ಮಹಾದ್ವಾರದಲ್ಲಿ ಮಾರ್ಗವನ್ನು ಮಾಡಿಕೊಂಡು ದಿವ್ಯಮಾಲಿಕೆಗಳನ್ನು ಶ್ರೀಹರಿಗೆ ಸಮರ್ಪಿಸಿ ತಾಯಿಯಬಳಿಗೆ ಬಂದಳು.

ರಾಜನು ಮಂತ್ರಿಗಳನ್ನು ಕರೆದು ಹೇಗಾದರೂಮಾಡಿ ಭಾಸ್ಕರಾಚಾರ್ಯರನ್ನು ಕರೆತರುವಂತೆ ಆಜ್ಞೆಮಾಡಿದನು. ಮಂತ್ರಿಗಳು ರಾಜಯೋಗ್ಯವಾದ ಉಪಾಯನದ್ರವ್ಯಗಳನ್ನು ತೆಗೆಸಿಕೊಂಡು ಮಿತ ಪರಿವಾರದಿಂದೊಡಗೂಡಿ ವನಾಂತರದಲ್ಲಿದ್ದ ಭಾಸ್ಕರಾಚಾರ್ಯರ ಬಳಿಗೆ ಬಂದರು. ಆಚಾರ್ಯರನ್ನು ನಮಸ್ಕರಿಸಿ-'ಮಹಾಸ್ವಾಮಿ, ಅಜ್ಞಾನದಿಂದ ರಾಜಭಟರು ತಮಗೆ ಮಹಾಪರಾಧಮಾಡಿದರು. ತಾವು ಶಾಂತಮೂರ್ತಿಗಳಾದುದರಿಂದ ದಯವಿಟ್ಟು ಕ್ಷಮಿಸಬೇಕು. ಯಾವ ಭಯವೂ ಇಲ್ಲದೆ ಮಠಕ್ಕೆ ದಯಮಾಡಬೇಕು. ತಮ್ಮ ವೃತ್ತಾಂತ

ವನ್ನು ಕೇಳಿ ಮಹಾರಾಜನು ದರ್ಶನಾಭಿಲಾಷಿಯಾಗಿರುವನು. ತಮ್ಮಂಥ ಮಹನೀಯರಿಗೆ ಯಥೇಷ್ಟ ಭೂಮಿಯನ್ನೂ ಗೋವುಗಳನ್ನೂ ದಾನಮಾಡಿ ಕೃತಾರ್ಥನಾಗಬೇಕೆಂದಿರುವನು. ಈ ಉಪಾಯನಗಳನ್ನು ಸ್ವೀಕರಿಸಬೇಕು. ಸಿದ್ಧವಾದೀ ರಥದಲ್ಲಿ ರಾಜಸನ್ನಿಧಿಗೆ ದಯಮಾಡಬೇಕು' ಎಂದು ಬಿನ್ನವಿಸಿದನು.

ಮಾತಿನ ಮಲ್ಲರಾದ ಮಂತ್ರಿಗಳ ಕಪಟೋಕ್ತಿಗೆ ಭಾಸ್ಕರಾಚಾರ್ಯರು ಮರುಳಾಗಲಿಲ್ಲ.-'ಮಂತ್ರಿಗಳೆ! ನಿಮ್ಮ ರಾಜನ ಬಳಿಗೆ ಬರಲು ನನಗೇನು ಕಾರ್ಯವಿದೆ? ನನ್ನ ದರ್ಶನದಿಂದ ರಾಜನಿಗೆ ಸಂತೋಷವಾಗಲು ನಾನು ಸ್ತ್ರೀಯಲ್ಲ. ನನ್ನ ಮುಖದಲ್ಲಿರುವದು ಶುದ್ಧಮೃತ್ತಿಕೆ. ನನ್ನ ಕಂಠದಲ್ಲಿರುವದು ತುಲಸೀಮಾಲೆ. ನನ್ನ ಬಾಹುಮೂಲಗಳು ಶಂಖಚಕ್ರ ಚಿನ್ಹಿತಗಳಾಗಿರುವವು. ನನ್ನ ಕಿವಿಯಲ್ಲಿ ತುಲಸೀದಳ. ನಾನು ವೃದ್ಧ, ಕೃಶಾಂಗ. ನನ್ನನ್ನು ಕರೆತರುವಂತೆ ನಿಮ್ಮ ರಾಜನು ಹೇಳಿರಲಾರ. ಆವನು ಕನ್ನಿಕೆಯನ್ನು ಕರೆತರುವಂತೆ ನಿಮಗೆ ಹೇಳಿರಬಹುದು. ಮರೆತು ನೀವು ನನ್ನಬಳಿಗೆ ಬಂದಿರಬಹುದು. ಬ್ರಾಹ್ಮಣರೆಂದರೆ ಬಡಬಾನಲನಿಗೆ ಸಮರೆಂದು ತಿಳಿಯಿರಿ. ಬಡಬಾನಲನ ಸಂಗದಿಂದ ನಿಮ್ಮ ರಾಜನಿಗೆ ಸುಖವಾಗಲಾರದು. ನಿಮ್ಮ ಕಾಣಿಕೆಗಳು ನಿಮ್ಮಲ್ಲೇ ಇರಲಿ ನನಗೆ ನಿಮ್ಮ ರಾಜದರ್ಶನ ಬೇಡ' ಎಂದು ತಿರಸ್ಕರಿಸಿದರು. ಮಂತ್ರಿಗಳು ಮತ್ತೂ ಬಿಡದೆ ತಮ್ಮ ರಾಜನ ಗುಣಕಥನಮಾಡಲು, ಭಾಸ್ಕರಾಚಾರ್ಯರು ಬೇಸರಗೊಂಡು ಹೀಗೆ ನುಡಿದರು.-'ಪ್ರಧಾನರೆ! ನಿಮ್ಮ ರಾಜನ ಗುಣಕಥನಮಾಡುವದು ನಿಮಗೆ ಸ್ವಾಭಾವಿಕವು. ನೀವು ಹೇಳುವಂತೆ ನಿಮ್ಮ ರಾಜನು ವರ್ಣಾಶ್ರಮ ಧರ್ಮಪರಿಪಾಲಕನಾಗಿದ್ದರೆ, ಸ್ಮೃತಿ ನಿಷಿದ್ಧವಾದ ಮಿಶ್ರವಿವಾಹಕ್ಕೆ ಪ್ರಯತ್ನಿಸುತ್ತಿರಲಿಲ್ಲ. ನೀತಿವಂತನಾಗಿದ್ದರೆ ಕನ್ನಿಕೆಯನ್ನು ಬಂಧಿಸಿ ತರಬೇಕೆಂದು ಅಜ್ಞೆಮಾಡುತ್ತಿರ

ಲಿಲ್ಲ. ದಯಾಮಯನಾಗಿದ್ದರೆ ನಿರಪರಾಧಿಯಾದ ವೃದ್ಧ ಸುಮಗುಪ್ತ ನನ್ನು ರಜ್ಜುವಿನಿಂದ ಬಂಧಿಸಿ, ಕಶೆಗಳಿಂದ ಪ್ರಹರಿಸಿ, ಚೋರಶಾಲೆ ಯಲ್ಲಿಡಿಸುತ್ತಿರಲಿಲ್ಲ ದೈವಭಕ್ತನಾಗಿದ್ದರೆ ಜನಾರ್ದನ ದೇವಾಲಯ ದ್ವಾರಕ್ಕೆ ಕಲ್ಲುಮುಳ್ಳುಗಳನ್ನೆಳೆಸುತ್ತಿರಲಿಲ್ಲ. ನಿಮ್ಮ ರಾಜನು ಕೇವಲ ಪಾಷಂಡನು. ನಿರ್ಘೃಣನು. ನೀತಿಬಾಹಿರನು. ದೈವದ್ವೇಷಿಯು. ತಾನು ಕಾಮುಕನಾದರೆ ವೇಶ್ಯಾಸ್ತ್ರೀಯರಲ್ಲಿ ತನ್ನ ಪಶುವೃತ್ತಿಯನ್ನು ತೋರಿಸಬಹುದಾಗಿತ್ತು.'

ಮಂತ್ರಿಗಳು ನಿರುತ್ತರರಾದರು. ರಾಜನಿಗೆ ನಡೆದ ಸಂಗತಿ ಯನ್ನು ತಿಳಿಸಿದರು. ಭಾಸ್ಕರಾಚಾರ್ಯನು ಮೂರ್ಖಮನುಷ್ಯನೆಂ ದರುಹಿದರು. ರಾಜನು—'ಏನಾದರಿರಲಿ; ಭಾಸ್ಕರಾಚಾರ್ಯನು ಮಂತ್ರಜ್ಞನು; ಪರಮ ವೈಷ್ಣವನು; ಅವನಿಂದ ನಮ್ಮ ಭಟರು ಮುಗ್ಧರಾದರು; ಅವನೊಡನೆ ವಿರೋಧಮಾಡಿಕೊಳ್ಳಬಾರದು; ಸಾಂತ್ವವಚನಗಳಿಂದ ಅವನ ಪ್ರಸನ್ನತೆಯನ್ನು ಪಡೆಯಬೇಕು' ಎಂದು ದೂತರನ್ನು ಕರೆದು ಜನಾರ್ದನ ದೇವಾಲಯವನ್ನು ಶೃಂಗ ರಿಸುವಂತೆ ಆಜ್ಞೆಗೈದನು.

ನಿರ್ಭಯರಾದ ವೈಶ್ಯರು ಭಾಸ್ಕರಾಚಾರ್ಯರ ಬಳಿಗೆ ಬಂದು, ರಾಜಸಭೆಯಲ್ಲಿ ನಡೆದ ವೃತ್ತಾಂತವನ್ನೂ ತತ್ಕಾಲದಲ್ಲಿ ತಾವು ಮಾಡಿದ ಆಪನ್ನಿವಾರಣೋಪಾಯವನ್ನೂ ತಿಳಿಸಿದರು. ಆಚಾರ್ಯ ರನ್ನು ವಿಭವದಿಂದ ಕರೆತಂದು ಮಠದಲ್ಲಿಳಿಸಿದರು. ಕನ್ನಿಕೆಯನ್ನು ರಾಜನಿಗೆ ವಿವಾಹಮಾಡಿಕೊಡುವೆವೆಂದು ವಂಚನೆಯಿಂದಾದರೂ ಮಾತನಾಡಿದುದು ಪಾಪಕರವೆಂದು ಆಚಾರ್ಯರು ನೊಂದುಕೊಂಡರು. ಸಂಶಯಗ್ರಸ್ತರನ್ನು ಕುರಿತು—'ಕೇಳಿ, ಕನ್ನಿಕೆಯು ಸಾಕ್ಷಾಲ್ಲಕ್ಷ್ಮಿ ಯು. ಮಾನವಳಲ್ಲ. ತುಲಸೀಮೂಲದಲ್ಲಿ ಅವತರಿಸಿದವಳು. ಮನುಷ್ಯಮಾತ್ರನು ಅವಳನ್ನು ಸ್ಪರ್ಶಿಸಲನರ್ಹನು. ಶ್ರೀಹರಿಯೇ

ಆವಳ ಪತಿಯು. ರಾಜನು ಕಾಮುಕನಾಗಿ ಆಕೆಯನ್ನು ಅಪಹರಿಸಲು ಪ್ರಯತ್ನಿಸಿದರೆ ಅವನನ್ನು ದಂಡಿಸಬೇಕು. ರಾಜನು ಕನ್ನಿಕೆಯನ್ನಪೇಕ್ಷಿಸುವದು ಯಜ್ಞದಲ್ಲಿ ಪವಿತ್ರವಾದ ಪುರೋಡಾಶವನ್ನು ಶುನಕನು ಬಯಸಿದಂತಾಗುವದು. ಧರ್ಮಕ್ಕಾಗಿ ಪ್ರಾಣತ್ಯಾಗ ಮಾಡುವದು ನಿಮಗೆ ಪುಣ್ಯಕರವು. ರಾಜನು ನಿಮ್ಮ ಆತತಾಯಿಯು. ಆತತಾಯಿ ವಧೆಯಿಂದಿಗೂ ಪಾಪವಲ್ಲ. ವಿಷ್ಣ್ವರ್ಥವಾಗಿ ಮಾಡುವ ದೇಹಾರ್ಪಣವು ಮೋಕ್ಷದಾಯಕವು. ನಿಮ್ಮ ಸ್ವರೂಪ ನಿರ್ಣಯದ ಕಾಲವಿದಾಗಿರುವದು. ನೀವು ಯಾವಾಗಲೂ ಸಿದ್ಧರಾಗಿರಬೇಕು' ಎಂದುಪದೇಶಿಸಿದರು.

ಗುರ್ವಾಜ್ಞೆಯನ್ನು ಪಡೆದು, ಗುರುಗಳಿಗೆ ವಂದಿಸಿ, ವೈಶ್ಯರು ತಂತಮ್ಮ ಮನೆಗಳಿಗೆ ಬಂದರು. ಸಂಶಯಾತ್ಮರಿಗೆ ಗುರೂಪದೇಶದಿಂದ ತೃಪ್ತಿಯಾಗಲಿಲ್ಲ ಅವರು ಗುಂಪಾಗಿ ಕುಸುಮಗುಪ್ತನ ಮನೆಗೆ ಬಂದರು. ರಾಜನಿಗೆ ಕನ್ನಿಕೆಯನ್ನು ಕೊಟ್ಟು ವಿವಾಹಮಾಡೆಂದು ಪರಿಪರಿಯಾಗಿ ದುರ್ಬೋಧನೆಮಾಡಿದರು. ಕುಸುಮಗುಪ್ತನು—'ಗುರುಗಳಾಜ್ಞೆಯೇನಾಯಿತು ಕೇಳಲಿಲ್ಲವೊ? ಹೋಗಿ ಹೋಗಿ! ನಿಮ್ಮ ಮಾತನ್ನು ಕೇಳುವನು ನಾನಲ್ಲ'ವೆಂದು ಜಬರಿಸಿದನು. ಮತ್ತವರು, -'ಹುಚ್ಚನೆ! ಲಕ್ಷ್ಮಿಯೆಂದರೇನು, ತುಲಸೀಮೂಲದಲ್ಲಿ ಜನಿಸುವದೆಂದರೇನು, ನಿನ್ನ ಮಗಳಾಗುವದೆಂದರೇನು, ಅವಳನ್ನು ಮದುವೆಮಾಡಿಕೊಳ್ಳಲು ವೈಕುಂಠದಿಂದ ಮಹಾವಿಷ್ಣುವು ಬರುವದೆಂದರೇನು, ನಿನಗೆ ವೃದ್ಧಾಪ್ಯದ ಅರಳುಮರಳುತನ. ನಿನಗೊಬ್ಬಗುರು, ಆ ವೈದಿಕ ಗೊಡ್ಡು ಭಾಸ್ಕರಾಚಾರ್ಯ. ಅವನೂ ವೃದ್ಧ; ನೀವಿಬ್ಬರು ಹುಚ್ಚರು ಸೇರಿ ನೀವು ಹಾಳಾಗುವದಲ್ಲದೆ ಊರನ್ನೇ ಹಾಳುಮಾಡುತ್ತಿರುವಿರಿ. ಈಗಲೂ ಆ ಗೊಡ್ಡು ಬ್ರಾಹ್ಮಣನ ಮಾತಿಗೆ ಮರುಳಾಗಬೇಡ. ನಿನ್ನ ನಿಮಿತ್ತವಾಗಿ ಕುಲವೇ ನಾಶವಾಗುವದು. ರಾಜನು ಬಂದು ಎಲ್ಲ

ರನ್ನೂ ಕೊಲ್ಲುವನು. ಇನ್ನಾದರೂ ನಿನ್ನ ಹುಚ್ಚುತನವನ್ನು ಬಿಡು. ನಮ್ಮ ಹಿತೋಕ್ತಿಯನ್ನು ಕೇಳು. ನೀನೂ ಸುಖಿಸು. ನಿನ್ನಿಂದ ನಾವೂ ಸುಖಿಸುವೆವು' ಎಂಬದಾಗಿ ಹೇಳಿದರು. ಸುಮಗುಪ್ತನು ಯಾರ ಮಾತಿಗೂ ಉತ್ತರ ಕೊಡಲಿಲ್ಲ. ಸುಮಗುಪ್ತನಿಗುಪದೇಶಿಸಿದಂತೆ ಅವನ ಹೆಂಡತಿ ಕಾವೇರಿಗೂ ಹೆಂಗಸರು ದುರುಪದೇಶಮಾಡಿ ನೋಡಿದರು. ಫಲಿಸಲಿಲ್ಲ.

ಸುಮದಂಪತಿಗಳು ಕನ್ಯಕಾನಿಮಿತ್ತದಿಂದ ಏನೇನು ಅನರ್ಥಗಳಾಗುವವೋ ಎಂದು ಪರಿತಪಿಸಿದರು. ಮಗಳನ್ನು ನೋಡಿ ಕರುಣಾರಸದಲ್ಲಿ ಪುಳುಕಿತರಾದರು. ಮನಸ್ಸಿನಲ್ಲಿ ಒಂದರಮೇಲೊಂದು ವಿಚಾರಗಳು ಬರಲು, ನಡುಗಿ ಹಾಗೆಯೇ ನಿದ್ರಾವಶರಾದರು. ಶ್ರೀಹರಿಯು ಉಭಯರಿಗೂ ಸ್ವಪ್ನದಲ್ಲಿ—'ನಾನು ನಿಮ್ಮ ಬಳಿಗೆ ಕನ್ಯಾರ್ಥಿಯಾಗಿ ಬಂದಿರುವೆನು. ನಾನು ವೈಶ್ಯನು. ನಿಮ್ಮ ಭಾಗಿನೇಯನು. ವೈಶ್ಯಕನ್ಯಾರ್ಹನು. ನನ್ನನ್ನು ಬಿಟ್ಟು ರಾಜನಿಗೆ ಹೇಗೆ ಕನ್ಯಾದಾನ ಮಾಡುವಿರಿ? ರಾಜನನ್ನು ಸಂಹರಿಸಿ ನಿಮ್ಮ ಭಯವನ್ನು ಪರಿಹರಿಸುವೆನು. ನನ್ನ ಭುಜಬಲವನ್ನಾದರೂ ನೋಡಿರಿ' ಎಂದು ದಿವ್ಯದರ್ಶನವಿತ್ತನು. ಸುಮಗುಪ್ತನು ನೀನಾರೆಂದು ಪ್ರಶ್ನೆಮಾಡಿದನು. ಶ್ರೀಹರಿಯು—'ನಾನು ನಿಮ್ಮ ಅತ್ಯಂತ ಪ್ರಿಯನು' ಎಂದು ಚತುರ್ಭುಜಗಳಲ್ಲಿ ಚಕ್ರಾದಿ ಚಿಹ್ನೆಗಳನ್ನು ತೋರಿ ಅದೃಶ್ಯನಾದನು. ದಂಪತಿಗಳು ಎಚ್ಚೆತ್ತು, ಸ್ವಪ್ನವೃತ್ತಾಂತವನ್ನು ಪರಸ್ಪರ ಮಾತಾಡಿಕೊಂಡು ಅವಾಙ್ಮಾನಸಗೋಚರನಾದ ಪರಮಾತ್ಮನ ಲೀಲೆಯೆಂದು ಮುಂದಿನ ಕಾರ್ಯದಲ್ಲಿ ದೃಢಮನಸ್ಕರಾದರು.

ವಾಸವಿಯು ಮಾನವಿಯಂತೆ ನಿದ್ರೆಯಿಂದೆದ್ದು, ತಂದೆತಾಯಿಗಳಿಗೆ ನಮಸ್ಕರಿಸಿ, ಚತುರ್ಭುಜಗಳಿಂದ ವಿರಾಜಿತವಾದ ತನ್ನ ಮೂಲಸ್ವರೂಪವನ್ನು ತೋರಿಸಿ ಮತ್ತೆ ಪೂರ್ವಸ್ಥಿತಿಯನ್ನು ತಾಳಿದಳು.

ತಂದೆತಾಯಿಗಳು ಪರಮಾಶ್ಚರ್ಯಭರಿತರಾದರು. ಭಾಸ್ಕರಾಚಾರ್ಯರ ವಾಕ್ಯದಂತೆ ವಾಸವಿಯನ್ನು ಲಕ್ಷ್ಮೀಸ್ವರೂಪಳೆಂದು ನಿಸ್ಸಂಶಯವಾಗಿ ತಿಳಿದರು.

ವಾಸವಿಯು ಸುಸ್ನಾತಳಾಗಿ ಪತ್ರಪುಷ್ಪಗಳನ್ನು ಸಂಗ್ರಹಿಸಿ ಮಾಲೆಗಳನ್ನು ಕಟ್ಟುತ್ತಾ, ಉದ್ಯಾನದ ಲತಾಮಂಟಪದಲ್ಲಿ ಕುಳಿತು ನಿತ್ಯವೂ ಶ್ರೀಕೃಷ್ಣನ ಲೀಲೆಯನ್ನು ಹಾಡುವಳು. ವಾರಿಗೆಯವರೂ ನೆರೆಹೊರೆಯ ಸ್ತ್ರೀಯರೂ ಬಂದುಕೇಳುವರು. ಮಲ್ಲೆಮಲ್ಲಿಗೆಗಳ ಮೊಗ್ಗೆಗಳಿಂದಲೇ ಜನಾರ್ದನಸ್ವಾಮಿಗೆ ಪಾದಾಭರಣ ಕಟಿಸೂತ್ರ ಹಸ್ತಾಭರಣ ಕಂಠಾಭರಣ ಕಿರೀಟಗಳನ್ನು ಕನ್ನಿಕೆಯು ರಚಿಸುವಳು. ಪುಷ್ಪಗಳಿಂದ ಕವಚವನ್ನು ಮಾಡುವಳು. ವಿವಿಧ ಗುಚ್ಛಗಳು, ಪುಷ್ಪದ ಗಿಣಿಗಳು, ದಿವ್ಯಮಾಲಿಕೆಗಳು ಇವುಗಳನ್ನು ಕಟ್ಟಿಡುವಳು. ಮತ್ತೆ ಎಲ್ಲವನ್ನೂ ವಾರಣವಾಗಿ ಪತ್ರಪೇಟಿಕೆಯಲ್ಲಿಡುವಳು. ನಿರ್ಮಾಲ್ಯ ಕುಸುಮಗಳಿಂದಲೂ ದಿವ್ಯಾಭರಣಗಳಿಂದಲೂ ತನ್ನನ್ನು ತಾನೇ ಶೃಂಗರಿಸಿಕೊಳ್ಳುವಳು. ಪುಷ್ಪಪೇಟಿಕೆಯನ್ನು ಆರಾಧನೆಯ ಕಾಲಕ್ಕೆ ಸರಿಯಾಗಿ ತಲೆಯಮೇಲಿಟ್ಟುಕೊಂಡು ದೇವಾಲಯವನ್ನು ಸೇರುವಳು. ಆಡುವದೆಲ್ಲಾ ಹರಿನಾಮ, ಮಾತಾಡುವದೆಲ್ಲಾ ಹರಿಕಥಾ, ಈ ಜೀವಿತವು ಶ್ರೀಹರಿಗೆ ಸೇರಿದುದು ಎಂಬ ಮಾತುಗಳಲ್ಲದೆ ಪ್ರಾಪಂಚಿಕರ ಮಾತೇ ಕನ್ನಿಕೆಗೆ ತಿಳಿಯದು. ಇಂಥಾ ವಂಶಪಾವನೆ ಕುಲಪಾವನೆ ಲೋಕಪಾವನೆ ಮಗಳನ್ನು ನೋಡಿ ತಾಯಿತಂದೆಗಳು ದೇಹವನ್ನೇ ಮರೆಯುವರು.

ಒಮ್ಮೆ ಕಾವೇರಿಯು ಕನ್ನಿಕೆಯ ಮಾತನ್ನು ಕೇಳಿ ಸುಖಿಸುವೆನೆಂದು—'ಅಮ್ಮಾ ವಾಸವಿ! ರಾಜನು ನಮ್ಮ ದ್ವೇಷಿಯಾಗಿರುವನು. ಬಂಧುಗಳು ಸಂಶಯಾತ್ಮರಾಗಿರುವರು. ನಮ್ಮಿಂದ ಕುಲವೇ ನಾಶವಾಗುವಕಾಲ ಬಂತೆಂದು ಹೆದರಿಸುವರು. ನಿನ್ನ ತಂದೆಯನ್ನೂ

ಆಚಾರ್ಯರನ್ನೂ ಹುಚ್ಚರೆನ್ನುವರು. ನಿನ್ನನ್ನು ರಾಜನಿಗೆ ಕೊಟ್ಟು ಮದುವೆ ಮಾಡೆಂದು ದುರ್ಬೋಧನೆ ಮಾಡುವರು. ಹೆದರಿಸುವರು. ಈ ವಿಚಾರದಲ್ಲಿ ನಿನ್ನ ಮನೋಗತವೇನೆಂಬುದನ್ನು ತಿಳಿಸುವೆಯಾ ತಾಯಿ?' ಎಂದು ಕಂಬನಿದುಂಬಿದವಳಾಗಿ ಪ್ರಶ್ನೆಮಾಡಿದಳು. ಕನ್ನಿಕೆಯು,-'ತಾಯೆ,—ನಿನಗಿನ್ನೂ ಸಂಶಯವೆ? ತಂದೆ ಮಾಡಿರುವ ಸಂಕಲ್ಪವೇ ನನ್ನ ಸಂಕಲ್ಪವು. ಗುರುಗಳು ಹೇಳುವ ಮಾತು ಸತ್ಯವು. ನೀನು ಹೆದರಬೇಡ. ಯಾವಾತನು ಪುರುಷರಿಗೂ ಪುರುಷನೋ, ಆ ಪುರುಷೋತ್ತಮನು ನನ್ನ ಸ್ವಾಮಿಯು. ಯಾವಾತನು ಸುಂದರಕ್ಕೆ ಸುಂದರನೋ ಆ ಮನ್ಮಥ ಮನ್ಮಥನು ನನ್ನ ಸ್ವಾಮಿಯು. ಯಾವನನ್ನು ನೋಡಿ ಮುನಿಗಳು ಮೋಹಿಸಿದರೋ, ಯಾವಾತನ ಪ್ರಸಾದದಿಂದವರು ಧನ್ಯಗೋಪಿಯರಾಗಿ ಅವನ ಆಲಿಂಗನ ಸುಖವನ್ನನುಭವಿಸಿದರೋ ಆ ಕೃಷ್ಣನು ನನ್ನ ಪತಿಯು. ಯಾವಾತನ ಲೋಕಮೋಹಕ ಮೋಹಿನೀ ರೂಪವನ್ನು ನೋಡಿ ಕಾಳಕೂಟಧರನೂ ವೈರಾಗ್ಯಚಕ್ರವರ್ತಿಯೂ ಆದ ಶಂಕರನು ಭ್ರಮಿಸಿ ಬೆಂಡಾದನೋ ಆ ಜನಾರ್ದನನು ನನ್ನ ಪತಿಯು. ನನ್ನ ಪತಿಯು ಸರ್ವವ್ಯಾಪಕನು. ನನ್ನ ಪತಿಯು ಸರ್ವನಿಯಾಮಕನು. ನನ್ನ ಪತಿಯು ಸರ್ವಸಾಕ್ಷಿಯು. ಅವನಿಗೇ ಕೊಟ್ಟು ನನ್ನ ವಿವಾಹಮಾಡಬೇಕಮ್ಮಾ. ಪರಮಾತ್ಮನನ್ನೇ ಅಳಿಯನನ್ನಾಗಿ ಪಡೆದಿರುವ ನೀವು ಪುಣ್ಯವಂತರಮ್ಮಾ. ಕನ್ನಿಕೆಯು ಯವ್ವನಕಾಲ ಪ್ರಾಪ್ತವಾಗುವವರೆಗೆ ಪಿತೃಗೃಹದಲ್ಲಿರುವಳು. ಅನಂತರ ಅವಳು ಪತಿಗೃಹವನ್ನು ಸೇರುವಳು. ಪ್ರಪಂಚದಲ್ಲಿರುವ ಎಲ್ಲ ಸ್ತ್ರೀಪುರುಷರಿಗೂ ನನ್ನ ಸ್ವಾಮಿಯೇ ಪತಿಯು. ನನ್ನ ಪತಿಯು ಸರ್ವಸಾರಭೋಕ್ತನು. ಅವನಿಗೆ ನನ್ನ ಸೌಂದರ್ಯವನ್ನೂ ಯವ್ವನವನ್ನೂ ಬಲವನ್ನೂ ನಾಕ್ಚಾತುರ್ಯವನ್ನೂ ಪ್ರೌಢಿಮೆಯನ್ನೂ ಶರೀರಸಹಿತವಾಗಿ ಸಮರ್ಪಿಸಿರುವೆನು. ಲೋಕದಲ್ಲಿ ಯಾವ ಕನ್ನಿಕೆಯನ್ನು ಯಾವ ವರನಿಗೆ ಕೊಟ್ಟು ವಿವಾಹಮಾಡಿದಪ್ಪೂ

'ದಾಸ್ಯಾಮಿವಿಷ್ಣವೇತುಭ್ಯಂ' ಎಂದು ಸಂಕಲ್ಪಿಸಿ ಕನ್ಯಾದಾನ ಮಾಡುವರಲ್ಲವೆ? ಅಂದಮೇಲೆ ನೀವು ಕ್ಷಿಪ್ರದಲ್ಲಿ ಗುರುಗಳಾದ ಭಾಸ್ಕರಾಚಾರ್ಯರನ್ನು ಬರಮಾಡಿರಿ. ನನ್ನನ್ನು ಶ್ರೀಜನಾರ್ದನ ನಿಗೆ ಸಮರ್ಪಿಸಿ ಆತನ ಅನುಗ್ರಹಕ್ಕೆ ಪಾತ್ರರಾಗಿರಿ' ಎಂದು ನುಡಿದಳು.

ಧರ್ಮಬೋಧಕವಾದೀ ಮಾತುಗಳನ್ನು ಕೇಳಿ ಕಾವೇರಿಯು ಶಾಂತಮನಸ್ಕಳಾದಳು. ಈ ಸಂಗತಿಯನ್ನು ಕೇಳಿದ ವೈಶ್ಯರನೇಕರು ಚಿಂತಾಕುಲರಾದರು. ಸುಮದಂಪತಿಗಳ ನಿಶ್ಚಯವನ್ನೂ ಕನ್ನಿಕೆಯ ಹಟಮಾರಿತನವನ್ನೂ ದೊರೆಯು ಕೇಳಿದರೆ ಪ್ರಾಣಾಪತ್ತೀ ಬರುವ ದೆಂದು ಭೀತರಾದರು. ಏನಾದರಾಗಲಿ, ಕಾಲಹರಣವಾದರಾಗಲಿ, ಮುಂದಾಗುವದನ್ನನುಭವಿಸೋಣ' ಎಂದು ಮೌಹೂರ್ತಿಕರ ಬಳಿಗೆ ಹೋಗಿ ವಿವಾಹಮುಹೂರ್ತವಿಡಲು ಆದಷ್ಟು ಕಾಲಹರಣಮಾಡಿ ರೆಂದು ಅವರನ್ನು ಉಪಾಯದಿಂದ ತಮ್ಮ ಸ್ವಾಧೀನಪಡಿಸಿಕೊಂಡರು.

ಇಷ್ಟರೊಳಗೆ ಕನ್ಯಾಮೋಹಪೀಡಿತನಾದ ವಿಷ್ಣುವರ್ಧನನು ವೈಶ್ಯಮುಖಂಡರನ್ನು ಕರೆತರುವಂತೆ ದೂತರನ್ನು ಕಳುಹಿಸಿದನು. ಉಪಾಯಕೋವಿದರಾದ ವೈಶ್ಯರು ಮುಂಚಿತವಾಗಿ ವಿನೋದಗೋಷ್ಠಿ ಯಲ್ಲಿ ಚತುರರಾದ ನಗರ ಬಾಲಕರನ್ನು ರಾಜಸನ್ನಿಧಿಗೆ ಕಳುಹಿಸಿ ದರು. ಕಾಮಾಂಧನಾದ ರಾಜನು ಬಾಲಕರನ್ನು ಸನ್ಮಾನಿಸಿ ವಿವಾಹ ವಿಷಯವನ್ನು ಕುರಿತು ಮಾತಾಡಿದನು. ಬಾಲಕರು, ಲಗ್ನನಿಶ್ಚಯ ವಾಗುವದೇ ತಡ ನಮಗೆ ಮೃಷ್ಟಾನ್ನಕ್ಕೂ ಉಡುಗೊರೆಗೂ ಏನೂ ಕಡಮೆಯಿಲ್ಲವೆಂದು ವಿನೋದಮಾಡಿದರು. ರಾಜನು ತನ್ನ ಪದ ಗೌರವವನ್ನೂ ವಯಸ್ಸನ್ನೂ ಮರೆತು ಬಾಲಕರ ಬೆನ್ನುತಟ್ಟಿ ಅವ ರಿಗೆ ವಸ್ತ್ರಭೂಷಣಗಳನ್ನು ಕೊಟ್ಟು ಅವರೊಡನೆ ಕುಣಿದಾಡಿದನು. ಇದೆಲ್ಲವನ್ನೂ ದೂರದಿಂದ ನೋಡಿ ಬಾಧಕವಿಲ್ಲವೆಂದು ವೈಶ್ಯಹಿರಿ ಯರು ಸಭೆಯನ್ನು ಪ್ರವೇಶಿಸಿದರು. ರಾಜನು ಒಬ್ಬೊಬ್ಬರನ್ನೂ

ದಿವ್ಯಾಸನಗಳಲ್ಲಿ ಕೂಡಿಸಿ, -'ವಣಿಜರೆ! ಇದುವರೆಗೆ ನೀವು ಪ್ರಜೆಗಳಾಗಿದ್ದಿರಿ; ನಾನು ನಿಮ್ಮ ರಾಜನಾಗಿದ್ದೆನು; ದೈವಸಂಕಲ್ಪದಿಂದಲೂ ನಿಮ್ಮ ದಯಾಗುಣದಿಂದಲೂ ನೀವು ನನ್ನ ಮಾನ್ಯಬಾಂಧವರಾದಿರಿ; ನಮ್ಮ ನಿಮ್ಮ ರಾಜಪ್ರಜಾಸಂಬಂಧವು ಇನ್ನು ಮೇಲೆ ತಪ್ಪಿಹೋಯಿತು' ಎಂದು ಹೇಳಿದನು. ಕುಚೋದ್ಯ ಕುಶಲರಾದ ವೈಶ್ಯರು -'ಅಹುದಹುದು, ಇನ್ನುಮೇಲೆ ನೀವು ರಾಜರಲ್ಲ, ನಾವು ಪ್ರಜೆಗಳಲ್ಲ, ನಮ್ಮ ನಿಮ್ಮ ಸಂಬಂಧವು ತಪ್ಪಿಹೋಯಿತು' ಎಂದು ನುಡಿದರು. ನೀತಿಗೆಟ್ಟ ರಾಜನ ಭೀತಿ ತಪ್ಪಿದಕೂಡಲೆ ಒಬ್ಬೊಬ್ಬನೂ ರಾಜನೊಡನೆ ವಿನೋದಕ್ಕಾರಂಭಿಸಿದನು.

ಒಬ್ಬನು—ರಾಜನೆ, ನೀನು ನನ್ನ ಭಾವನಾದೆ!

ರಾಜ—ಅಹುದು, ಇನ್ನುಮುಂದೆ ಒಬ್ಬೊಬ್ಬರ ಪರಿಚರ್ಯ ಮಾಡಿಕೊಳ್ಳುತ್ತೇನೆ.

ಮತ್ತೊಬ್ಬನು—ರಾಜನೆ! ನಾನು ಸುಮಗುಪ್ತನ ದಾಯಾದನು. ನಿನ್ನ ಮಾವನಾದೆ!

ರಾಜ—ಆಗಬಹುದು; ತಾವು ನನಗೆ ಪರಮ ಪೂಜ್ಯರಾದಿರಿ.

ಮತ್ತೊಬ್ಬನು—ರಾಜನೆ! ಈ ಬಾಂಧವ್ಯದಿಂದ ನೀನು ನನಗೆ ಸೋದರ ಮಾವನಾಗುವೆ. ಬಡವನೆಂದು ಕಡೆಗಣ್ಣಿಂದ ನೋಡಬಾರದು.

ರಾಜ—ಹಾಗಂದರೇನು? ಇನ್ನುಮೇಲೆ ನಿಮಗೆ ಬಡತನವೆಲ್ಲಿಯದು? ಈಗಲೇ ನಿಮಗೆ ಉಡುಗೊರೆಯನ್ನು ಕೊಡುವೆನು. ಸನ್ಮಾನಿಸುವೆನು.

ಮತ್ತೊಬ್ಬನು—(ತಲೆಯನ್ನು ನಡುಗಿಸುತ್ತಾ) ರಾಜನೆ! ನಾನು ವೃದ್ಧನು. ಈ ಬಂಧುತ್ವವಾದರೆ ನೀನು ನನಗೆ ಪೌತ್ರನಾಗುವೆ.

ರಾಜ—ನಾನೇ ಭಾಗ್ಯವಂತನು. ಹಿರಿಯರಾದ ತಾವು ನನ್ನನ್ನು ಆಶೀರ್ವದಿಸಬೇಕು.

ಕಾಮಾಂಧನಾದ ರಾಜನು ವೈಶ್ಯರ ಮರ್ಮೋಕ್ತಿಗಳನ್ನು ಅರ್ಥ ಮಾಡಿಕೊಳ್ಳಲಿಲ್ಲ. ಕನ್ನಿಕೆಯು ತನ್ನ ತೊಡೆಯಮೇಲೆ ಕುಳಿತಿರುವಳೆಂದೇ ತಿಳಿದನು. ವಿನೋದಮಗ್ನನಾದುದರಿಂದ ಪ್ರಸ್ತಾಪಿಸಬೇಕಾದ ವಿಷಯಗಳೊಂದೂ ಉಳಿಯಲಿಲ್ಲ. ಜೋಯಿಸರನ್ನು ಕರೆಯುವದೇ ತಡ; ಅವರು ಮುಹೂರ್ತನಿಶ್ಚಯಮಾಡುವದೇ ತಡ; ವಿವಾಹಮಾಡಿಕೊಳ್ಳುವದು; ಕನ್ನಿಕೆಯನ್ನು ಕರೆದುಕೊಂಡು ರಾಜಮಹೇಂದ್ರಕ್ಕೆ ಪ್ರಯಾಣಮಾಡುವದು; ಇದಕ್ಕಿಂತ ಹೆಚ್ಚು ಕೆಲಸವೇ ಉಳಿಯಲಿಲ್ಲವೆಂದು, ಆನಂದದಿಂದ ಉಬ್ಬಿ ಜೋಯಿಸರನ್ನು ಕರೆಯಲು ದೂತರನ್ನು ನೇಮಿಸಿದನು.

ರಾಜಾಜ್ಞೆಯನ್ನು ಶಿರಸಾವಹಿಸಿ ಜ್ಯೋತಿಷ್ಕರು ದೊಡ್ಡ ದೊಡ್ಡ ವಹಿಗಳನ್ನು ಹೊರಿಸಿಕೊಂಡು ಆಸ್ಥಾನಕ್ಕೆ ಬಂದು ರಾಜಾಶೀರ್ವಾದಮಾಡಿ ಯೋಗ್ಯಪೀಠಗಳಲ್ಲಿ ಕುಳಿತರು.

ರಾಜ—ಈಗ ನಿಮ್ಮನ್ನು ಕರೆಸಿದಕಾರಣವೇನೆಂಬುದನ್ನು ಹೇಳಬಲ್ಲಿರಾ ?

ಜೋಯಿಸರು—ಭೂಪಾಲ! ಲಗ್ನವಿಚಾರವಿರಬಹುದೆಂದು ತೋರುವದು. ವಿಶೇಷ ಸಂಗತಿಯಿದ್ದರೆ ಅಪ್ಪಣೆಯಾಗಬೇಕು.

ರಾಜ—ಸರಿಸರಿ. ನೀವು ಹೇಳಿದ್ದು ಸರಿ. ಇಂದು ನಾಳೆಯೊಳಗೆ ವಿವಾಹಲಗ್ನವನ್ನು ನಿಶ್ಚಯಮಾಡಿರಿ.

ಜೋ—ಜಾತಕಗಳನ್ನು ನೋಡಬೇಕು.

ರಾಜ—ಅದೊಂದೂ ಬೇಕಾಗಿಲ್ಲ. ಚಂದ್ರತಾರಾಬಲ ನೋಡಿ ಲಗ್ನವಿಟ್ಟರೆ ಸಾಕು.

ಜೋ—ಕನ್ನಿಕೆಯ ಹೆಸರು ?

ರಾಜ—**ವಾಸವೀ!** ಸುಮಗುಪ್ತನ ಮಗಳು.

ಜೋ—ವಾಸವಿಯೆಂದಮೇಲೆ ಕೇಳುವದೇನು? ಮಹಾರಾಜ ಯೋಗ್ಯವಾದ ಕನ್ನಿಕೆಯೇ!

ರಾಜ—ಈ ವೈಶ್ಯಮಹಾಜನರು ಕೃಪೆಮಾಡಿ ಈ ಬಾಂಧವ್ಯ ವನ್ನು ನಿಶ್ಚಯಮಾಡಿದ್ದಾರೆ.

ಜೋ—ತಮ್ಮಂಥಾ **ವರನು** ದೊರಕುವದು ಸಾಮಾನ್ಯವಲ್ಲ. ಕುಸುಮಶೆಟ್ಟಿಯು ಮಾಡಿದ ತಪಸ್ಸು ಸಫಲವಾಯಿತು.

ರಾಜ—ವಿಷಯಾಂತರಗಳಿರಲಿ, ನಾಳೆನಾಡಿದ್ದರಲ್ಲಿ ವಿವಾಹ ವಾಗಬಹುದೊ?

ಜೋ—ಮಾಘಮಾಸದವರೆಗೆ ಕಾಯಬೇಕು. ಗುರುಶುಕ್ರ ಮೌಢ್ಯಗಳಿವೆ. ಶೂನ್ಯಮಾಸಗಳಿವೆ ಅಲ್ಲಿನವರೆಗೆ ಲಗ್ನವಿಡುವ ಹಾಗಿಲ್ಲ.

ಜೋಯಿಸರ ಮಾತನ್ನು ಕೇಳಿ ರಾಜನಿಗೆ ಕೋಪವುಂಟಾಯಿತು. -'ಏನು! ನೀವು ಮೂರ್ಖರಾಗಿರುವಿರಿ. ಇಂಗಿತಜ್ಞಾನವೆಂಬುವದು ನಿಮಗಿಲ್ಲ. ನನಗಿದು ಪ್ರಥಮ ವಿವಾಹವಲ್ಲ. ರಾಜರಿಗೆ ಗಾಂಧರ್ವ ವಿವಾಹಕ್ಕೂ ರಾಕ್ಷಸ ವಿವಾಹಕ್ಕೂ ಕಾಲನಿಯಾಮಕವೆಲ್ಲಿರುವದು?'

ಜೋಯಿಸರು, ವಿನಯದಿಂದ,-'ಕೋಪಿಸಬಾರದು ಮಹಾ ಸ್ವಾಮಿಾ, ತಮ್ಮ ಶ್ರೇಯೋಭಿಲಾಷಿಗಳಾಗಿ ನಾವು ಹೇಳುವೆವಲ್ಲದೆ ಶಾಸ್ತ್ರವಿರುದ್ಧ ಮಾತುಗಳನ್ನಾಡುವರಲ್ಲ. ಗಾಂಧರ್ವ ವಿವಾಹ ವಾಗಲಿ ರಾಕ್ಷಸ ವಿವಾಹವಾಗಲಿ ಈ ಸಮಯದಲ್ಲಿ ನಡೆದರೆ ಗ್ರಹ ಗಳಿಂದಾಗುವ ಫಲಾಫಲಗಳು ಎಂದಿಗೂ ಯಾರಿಗೂ ತಪ್ಪುವದಿಲ್ಲ. ಈ ಕಾಲದಲ್ಲಿ ಲಗ್ನವಿಟ್ಟರೆ ವರನಾಶ ಕನ್ಯಾನಾಶ ಅಥವ ಉಭಯ ನಾಶವಾಗುವ ಸಂಭವವಿರುವದು. ಈ ಕಾಲದಲ್ಲಿ ಮಹಾಯುದ್ಧ

ಗಳಾದರೂ ಆಗಬಹುದು. ಪ್ರಜಾ ಲಯವಾಗಬಹುದು. ಇದ್ದ ಸಂಗತಿಯನ್ನು ಮಹಾಸನ್ನಿಧಾನದಲ್ಲಿ ವಿಜ್ಞಾಪಿಸಿರುವೆವು. ಇದೋ ಪಂಚಾಂಗವಿದೆ; ಪ್ರಮಾಣ ಗ್ರಂಥಗಳಿವೆ; ಯಾರು ಬೇಕಾದರೂ ವಿಚಾರಮಾಡಬಹುದು' ಎಂಬದಾಗಿ ಬಿನ್ನವಿಸಿದರು.

ವಿನಯಾನ್ವಿತರಾದ ವೈಶ್ಯರು—'ಮಹಾರಾಜನೆ! ಅವಸರವೇಕೆ? ವಾಗ್ದತ್ತವಾದ ಮೇಲೆ ಕನ್ನಿಕೆಯು ನಿನ್ನವಳಾದಳು. ಮಹಾರಾಜನಿಗೋಸ್ಕರವಾಗಿಯೇ ಕನ್ನಿಕೆಯು ಅವತಾರವಾಯಿತೆಂದು ತಿಳಿದಿರುವೆವು ಹಾಗಿಲ್ಲದಿದ್ದರೆ ವೈಶ್ಯರಲ್ಲಿ ಇಷ್ಟು ಸೌಂದರ್ಯವೆಲ್ಲಿ ಬಂದೀತು? ಕನ್ನಿಕೆಯು ರಾಜ್ಯಲಕ್ಷ್ಮಿಯಾಗಿರುವಳು. ಅವಳಿನ್ನೂ ಪ್ರಬುದ್ಧಳಾಗಿಲ್ಲ. ಪ್ರಬುದ್ಧ ವಯಸ್ಸು ಪ್ರಾಪ್ತವಾದಂತೆಯೂ ಕಂಡುಬರುವದಿಲ್ಲ. ಈಗ ವಿವಾಹವಾದರೆ ತಾನೆ ಉಪಯೋಗವೇನು? ಮಾಘಮಾಸದ ಹೊತ್ತಿಗೆ ಕನ್ನಿಕೆಯು ವಯಸ್ಕಳಾದರೂ ಆಗಬಹದು. ಕೆಟ್ಟಕಾಲದಲ್ಲಿ ವಿವಾಹಮಾಡಿ ಅದರಿಂದ ಹಾನಿಯುಂಟಾದರೆ ಅನುಭವಿಸುವವರು ನಾವೇ ಅಲ್ಲವೆ? ವಿವಾಹಾನಂತರ ನೀನು ನಮ್ಮವನೇ ಆಗುವೆ. ನಿನ್ನ ಲಾಭಾಲಾಭ ಜಯಾಪಜಯಗಳು ನಮ್ಮದೆಂದೇ ಭಾವಿಸಿರುವೆವು. ಕನ್ನಿಕೆಗೆ ಅಶುಭವಾದರೆ ಆ ದುಃಖದಿಂದ ನಾವು ಮೃತರಾಗುವೆವು. ಆದ್ದರಿಂದ ಮಾಘದಲ್ಲೇ ವಿವಾಹವಾಗಲಿ. ಲಗ್ನಪ್ರಯತ್ನಗಳಾದರೂ ರಾಜಯೋಗ್ಯವಾಗುವಂತೆ ನಡೆಯಬೇಕಾಗುವದು. ಎಲ್ಲವನ್ನೂ ವಿಚಾರಿ ನೀನು ತವಕಿಸುವೆಯಾದರೆ ನಾವು ಉಪಾಯಶೂನ್ಯರು' ಎಂಬದಾಗಿ ನುಡಿದರು.

ರಾಜನು ನಿರುಪಾಯನಾದನು ವೈಶ್ಯರ ಮಾತನ್ನೇ ಮನ್ನಿಸಿದನು. -'ಖಂಡಿತವಾಗಿ ಮಾಘದಲ್ಲೇ ಲಗ್ನವಾಗಬೇಕು, ಗೊತ್ತಾಯಿತೊ? ಇದರಿಂದ ವೈಶ್ಯಕುಲೋದ್ಧಾರವಾದೀತು! ಇದರಿಂದ ಐಶ್ವರ್ಯ ಪ್ರಾಪ್ತವಾದೀತ.' ಎಂಬದಾಗಿ ಉದ್ಘೋಷಿಸಿದನು.

ವೈಶ್ಯರು,-'ಮಹಾರಾಜ! ಇನ್ನೂ ಸಂಶಯವೆ? ಭೂಪತಿಗೆ ನಿಶ್ಚಯಮಾಡಿರುವ ಕನ್ನಿಕೆಯನ್ನು ಅನ್ಯರಿಗೆ ಕೊಟ್ಟು ಬದುಕುವೆವೆ? ನಿನಗಿಂತ ಉತ್ತಮ ವರನೆಲ್ಲಿರುವನು? ನಾವೆಂದಿಗೂ ಅನೃತ ಮಾಡುವರಲ್ಲ. ನಮ್ಮ ಮಾತಿಗೆ ಸೂರ್ಯಚಂದ್ರರು ಸಾಕ್ಷಿ. ಭೂಪತಿಗೆ ಕನ್ಯಾದಾನ ಮಾಡುವವನು ಧನ್ಯನು. ಭೂಪತಿಗಿಂತಧಿಕರಾರು? ಏನೇ, ಪ್ರಾಣಾಪತ್ತು ಬಂದರೂ ನಮ್ಮ ಮಾತನ್ನು ನಡೆಸುವೆವು.'

ಈ ರೀತಿಯಾಗಿ ವಿಷ್ಣುವರ್ಧನನು ಆರ್ಯರಿಂದ ಬೋಧಿತನಾಗಿ ತನ್ನ ಮನಸ್ಸಿನಲ್ಲುಂಟಾದ ಸಂಶಯವನ್ನು ಬಿಟ್ಟು ರಾಜಮಹೇಂದ್ರಕ್ಕೆ ಪ್ರಯಾಣಮಾಡಲು ಮಂತ್ರಿ ಮೊದಲಾದವರಿಗೆ ಸಿದ್ಧತೆಮಾಡುವಂತೆ ಆಜ್ಞೆಗೈದನು. ರಾಜಾಜ್ಞೆಯಂತೆ ಚತುರಂಗ ಬಲವು ಸಜ್ಜಿತವಾಯಿತು. ಆನೆಕುದುರೆಗಳು ಅಲಂಕೃತಗಳಾಗಿ ಸಾಲಾಗಿ ಹೊರಟವು. ದಿವ್ಯರಥದಲ್ಲಿ ವಸನಭೂಷಣಗಳಿಂದಲಂಕೃತನಾಗಿ ಸಕಲ ವಾದ್ಯವೈಭವಗಳಿಂದ ಮಹಾರಾಜನು ಪ್ರಯಾಣಮಾಡಿದನು. ವೈಶ್ಯಪ್ರಮುಖರು ರಾಜನನ್ನು ಕೆಲವು ದೂರ ಕಳುಹಿಸಿ ಅಪ್ಪಣೆಯನ್ನು ಪಡೆದು ಸ್ವಗೃಹಗಳಿಗೆ ಹಿಂದಿರುಗಿದರು. ವಿಷ್ಣುವರ್ಧನನು ಮಾರ್ಗದಲ್ಲಿ ವನವೈಭವವನ್ನು ನೋಡುತ್ತಾ, ಕ್ಷಣಕ್ಷಣಕ್ಕೂ ಕನ್ನಿಕೆಯನ್ನು ಸ್ಮರಿಸುತ್ತಾ ಮಾಘಮಾಸವೆಂದಿಗೆ ಬರುವದೋ ಎಂದು ತವಕಿಸುತ್ತಾ ಪಟ್ಟಣದ ಬಳಿಗೆ ಬಂದನು.

ದಿಗ್ಜಯಮಾಡಿ ಬಂದ ನರಪತಿಯನ್ನು ಅಟ್ಟಹಾಸದಿಂದ ಎದುರುಗೊಳ್ಳಲು ನಾಗರಿಕರು ನಗರವನ್ನು ಶೃಂಗರಿಸಿದ್ದರು. ಪುರಪ್ರವೇಶ ಮಹೋತ್ಸವದಲ್ಲಿ ವಾರಾಂಗನೆಯರು ರಾಜನ ಶಿರಸ್ಸಿನಲ್ಲಿ ಲಾಜಾಪುಷ್ಪಗಳನ್ನೆರಚಿದರು. ದಾರಿಯುದ್ದಕ್ಕೂ ನಾರಿಯರು ಆರತಿಗಳನ್ನು ಬೆಳಗಿದರು. ಪ್ರಜೆಗಳು ಅನರ್ಘ್ಯ ಕಾಣಿಕೆಗಳನ್ನೊಪ್ಪಿಸಿದರು. ನಗರ ಶೃಂಗಾರವಾಗಲಿ, ಪ್ರಜೆಗಳ ಕಾಣಿಕೆಯಾಗಲಿ,

ಸುಂದರಿಯರ ಆರತಿಗಳಾಗಲಿ, ರಾಜನ ಚಿತ್ತಾಕರ್ಷಣೆ ಮಾಡಲಿಲ್ಲ. ದರ್ಶನಕ್ಕೆ ಬಂದ ಪಟ್ಟಣಿಗರನ್ನು ರಾಜನು ಮಾತನಾಡಿಸಲಿಲ್ಲ. ವಾರಾಂಗನೆಯರ ನರ್ತನವನ್ನು ಕಣ್ಣೆತ್ತಿ ನೋಡಲಿಲ್ಲ. ವಂದಿ ಮಾಗಧರ ಸ್ತೋತ್ರಪಾಠಗಳನ್ನು ಕಿವಿಯಿಂದ ಕೇಳಲಿಲ್ಲ. ಖುರ ಳ್ಯುತ್ಸವವನ್ನು ನೋಡಲಿಲ್ಲ. ಮಹಾರಾಜನು ದಿಗ್ವಿಜಯುಮಾಡಿಕೊಂಡು ಬಂದನೆಂದು, ಅರಮನೆಯ ಬಾಗಿಲಿನಲ್ಲೂ ನಾರಿಯರು ಆರತಿಗಳನ್ನು ಬೆಳಗಿದರು. ದೃಷ್ಟಿಪರಿಹಾರವಾಗಲೆಂದು ನೂತನ ವಸ್ತ್ರಗಳನ್ನು ಹರಿದರು. ಶಾಂತ್ಯರ್ಥವಾಗಿ ಬಲಿಗಳನ್ನರ್ಪಿಸಿದರು. ಯಾವದನ್ನೂ ರಾಜನು ಗಮನಿಸಲಿಲ್ಲ. ಅಂತಃಪುರವನ್ನು ಸೇರಿದವನು ಹೊರಗೆ ಬರಲಿಲ್ಲ. ರಾಣಿಯರನ್ನು ಕಣ್ಣೆತ್ತಿ ನೋಡಲಿಲ್ಲ. ಆಯಾಸವಾಗಿರ ಬಹುದೆಂದು ಪಟ್ಟಮಹಿಷಿಯೇ ವ್ಯಜನವನ್ನು ಬೀಸಿದರೂ ಅವಳನ್ನು ಪುರಸ್ಕರಿಸಲಿಲ್ಲ. ಮೃಷ್ಟಾನ್ನಗಳನ್ನು ತಂದಿಟ್ಟರೆ ಭುಂಜಿಸಲಿಲ್ಲ. ಪರಿಮಳ ತಾಂಬೂಲವನ್ನು ಸವಿಯಲಿಲ್ಲ. ಕನ್ನಿಕೆಯನ್ನೇ ಸ್ಮರಿಸುತ್ತಾ ನಿಶ್ಚೇಷ್ಟಿತನಾದನು.

ಇಲ್ಲಿಗೆ ನಾಲ್ಕನೇ ಅಧ್ಯಾಯುವು ಮುಗಿದುದು.



# ಐದನೆಯ ಅಧ್ಯಾಯ



ಶ್ರೀ **ಶಾಲಂಕಾಯನ** ಮಹಾಮುನಿಯು ವೈಶ್ಯಮುನೀಶ್ವರರನ್ನು ಕುರಿತು ಹೇಳುವನೇನೆಂದರೆ :—

ಮಹಾದ್ರಿನಗರದ ವೈಶ್ಯಮಹಾಜನರು ವಿಷ್ಣುವರ್ಧನ ಮಹಾರಾಜನನ್ನು ತತ್ಕಾಲದಲ್ಲಿ ಸಂತವಿಸಿ ತಮ್ಮ ಪಟ್ಟಣದಿಂದ ರಾಜಮಹೇಂದ್ರಕ್ಕೆ ಪ್ರಯಾಣಮಾಡಿಸಿದರು. ಮಹಾರಾಜನು ಮಾಘಾದಿ ಪಂಚಕದಲ್ಲಿ ತನ್ನ ವಿವಾಹವಾಗುವದೆಂದು ನಂಬಿದನು. ಮಾಘಮಾಸ ಬಂದರೆ ತಮ್ಮ ಗತಿ ಏನಾಗುವದೆಂಬ ಭೀತಿಯು ವೈಶ್ಯರಿಗಾಯಿತು. ಭಾಸ್ಕರಾಚಾರ್ಯರು, ಕನ್ಯಾಹರಣ ಮಾಡುವೆನೆಂದು ವಿಷ್ಣುವರ್ಧನನು ಯುದ್ಧಕ್ಕೆ ಬಂದರೆ, ವೈಶ್ಯರು ಆಪದ್ಧರ್ಮವೆಂದು ಯುದ್ಧಮಾಡಲು ಸಿದ್ಧರಾಗಿರಬೇಕೆಂದು ತಿಳಿಸಿದರು. ನಗರಸ್ಥ ವೈಶ್ಯರು ಮುಂದಿನ ಪರಿಸ್ಥಿತಿಯನ್ನು ಕುರಿತು ಮಂತ್ರಾಲೋಚನೆ ಮಾಡಿದರು. ತಮ್ಮ ಹದಿನೇಳು ಉಪನಗರಗಳ ಮುಖಂಡರನ್ನು ಕರೆಸಿ ಅವರ ಸಮ್ಮತಿ ಪಡೆಯಬೇಕೆಂದು ನಿಶ್ಚಯಿಸಿದರು. ಬಹು ಜಾಗರೂಕತೆಯಿಂದ ಕುಲಾಚಾರ ನಿರ್ಣಯಕ್ಕಾಗಿ ಸಕಲ ವೈಶ್ಯರೂ ಬರಬೇಕೆಂದು ಅರ್ಥಗರ್ಭಿತವಾಗಿರುವಂತೆ ಪತ್ರಗಳನ್ನು ಬರೆದರು. ಅವರು ತಮ್ಮ ಪತ್ನೀಪುತ್ರ ಸಹಿತರಾಗಿ ಮಹಾದ್ರಿಗೆ ಸಕಾಲದಲ್ಲಿ ಬಂದು ಸೇರಿದರು. ಬಂದವರಿಗೆ ಶ್ರೀಜನಾರ್ದನ ದೇವಾಲಯದಲ್ಲಿ ಉಪಚಾರಗಳು ನಡೆದವು. ಎಲ್ಲರೂ ರಹಸ್ಯವಾಗಿ ಆಡಿಕೊಳ್ಳಬೇಕಾದ ಸಂಗತಿಗಳನ್ನು ಮಾತನಾಡಿಕೊಂಡರು. ಬಹಿರಂಗ ಸಭೆಯಲ್ಲಿ ನಡೆಯಬೇಕಾದ ಕಾರ್ಯಕ್ರಮುವನ್ನು ಸರ್ವರಿಗೂ ತಿಳಿಸಿದರು.

ಕುಲಶ್ರೇಷ್ಠನು ಮಹಾಸಭೆಯಲ್ಲಿ ನಿಂತು ಅರ್ಥವತ್ತಾದ ಗಂಭೀರ ವಾಣಿಯಿಂದ—'ಬಂಧು ಜನರೇ! ವಿಷ್ಣುವರ್ಧನ ಮಹಾರಾಜನು ದಿಗ್ವಿಜಯಮಾಡಿಕೊಂಡು ಬರುತ್ತಾ ನಮ್ಮೂರಿನ ಶೃಂಗಾರ ವನದಲ್ಲಿ ಬಂದಿಳಿದನು. ನಾವು ಆತನನ್ನು ಗೌರವಿಸಿ ಪಟ್ಟಣಕ್ಕೆ ಕರೆತಂದು ಆತಿಥ್ಯಮಾಡಿದೆವು. ಸಾಯಾಹ್ನಪೂಜೆಗೆ ಪುಷ್ಪಪೇಟಿಕೆಯನ್ನು ಶಿರಸ್ಸಿನ ಮೇಲಿಟ್ಟುಕೊಂಡು ವಾಸವೀದೇವಿಯು ಜನಾರ್ದನ ದೇವಾಲಯಕ್ಕೆ ಹೋಗುತ್ತಿದ್ದಳು. ಆಕೆಯನ್ನು ಮಹಾರಾಜನು ನೋಡಿ ಮೋಹಿತನಾದನು. ಪುರಪ್ರಮುಖರನ್ನು ಕರೆಸಿ ಆಕೆಯನ್ನು ತನಗೆ ವಿವಾಹಮಾಡಿಕೊಡಬೇಕೆಂದು ಕೇಳಿದನು. ರಾಜನೆಂಬ ಗೌರವದಿಂದ ವಚನಕೊಟ್ಟು ನಾವು ಆತನನ್ನು ಕಳುಹಿಸಿದೆವು. ನಿಮ್ಮೆಲ್ಲರ ಅಭಿಪ್ರಾಯ ತಿಳಿದು ಲಗ್ನನಿಶ್ಚಯಮಾಡಬೇಕೆಂದು ಯೋಚಿಸಿ ನಿಮ್ಮನ್ನು ಕರೆಸಿದೆವು. ಈ ಕಾರಣದಿಂದ ಮಾಘಮಾಸದ ಅವಧಿಯನ್ನು ಬೇಡಿಕೊಂಡೆವು. ಮುಂದೇನು ಮಾಡಬೇಕೆಂಬುದರ ನಿರ್ಣಯವನ್ನು ತಾವು ಮಾಡಬೇಕು' ಎಂದು ತಿಳಿಸಿದನು.

ಕೆಲವರು—'ಆಗಬಹುದು. ಮಹಾರಾಜನು ಚಂದ್ರಕುಲೋದ್ಭವನು. ಕುಲಾಧಿಕನು. ಅಂಥವನನ್ನು ವರಿಸಿ ಕನ್ನಿಕೆಯು ಸುಖವಾಗಿ ಬಾಳುವಳು. ರಾಜಬಂಧುತ್ವದಿಂದ ನಮ್ಮ ಕುಲಗೌರವ ಹೆಚ್ಚುವದು. ಈ ಬಾಂಧವ್ಯವು ಸಂತೋಷಕರ'ಎಂದು ಹೇಳಿದರು.

ಕುಲಾಭಿಮಾನಿಗಳು—'ವರ್ಣೇತರ ವಿವಾಹವು ಕಲಿಯುಗದಲ್ಲಿ ಗರ್ಹಿತವಾಗಿರುವದು. ವಿಷ್ಣುವರ್ಧನನು ಕಾಮಾಂಧನು. ಕೇವಲ ದುಷ್ಟನು. ಬಲಾತ್ಕಾರವಾಗಿ ಕನ್ನಿಕೆಯನ್ನಪಹರಿಸುವವನೆಂಬುದರಲ್ಲಿ ಸಂಶಯವಿಲ್ಲ. ರಾಜ

ಬಾಂಧವ್ಯವು ನಮಗೆ ಗೌರವವಲ್ಲ. ಕನ್ನಿಕೆಯು ಪಟ್ಟ ಮಹಿಷಿಯಾಗುವದಿಲ್ಲ. ಸಾಮ ದಾನ ಭೇದೋಪಾಯ ಗಳಿಂದ ಕುಲಮರ್ಯಾದೆಯನ್ನು ಕಾಪಾಡಿಕೊಳ್ಳಬೇಕು. ಮಕ್ಕಳೂ ರಾಜರೂ ಹಿಡಿದ ಹಟವನ್ನು ಬಿಡುವದಿಲ್ಲ. ಕನ್ನಿಕೆಯಮೇಲೆ ದೃಷ್ಟಿಬಿದ್ದಿರುವದು ಸ್ಥಿರವಾಗಿ ನಿಲ್ಲು ವದೋ ತಾತ್ಕಾಲಿಕವಾದ ಚಾಂಚಲ್ಯವೆನಿಸುವದೋ ವಿಚಾರಿಸಬೇಕು. ಕುಶಲರಾದವರು ರಾಜಮಹೇಂದ್ರಕ್ಕೆ ಹೋಗಿ ರಾಜನ ಶೀಲಸ್ವಭಾವಗಳನ್ನು ಪರೀಕ್ಷಿಸಬೇಕು. ಬಹು ದ್ರವ್ಯ ವ್ಯಯಮಾಡಿ ಮಂತ್ರಿಗಳಿಂದ ಒಳಮರ್ಮ ವನ್ನು ತಿಳಿಯಬೇಕು. ಯಾವ ರೀತಿಯಿಂದಲೂ ಸ್ವಧ ರ್ಮ ರಕ್ಷಣೋಪಾಯವನ್ನು ಸಾಧಿಸಬೇಕು' ಎಂಬ ದಾಗಿ ನುಡಿದರು.

ಜನಗಳಲ್ಲಿ ಭಿನ್ನಾಭಿಪ್ರಾಯಗಳು ಬಹಳವಾದವು. ಈ ರೀತಿ ಕೆಲವು ಕಾಲ ಕಳೆಯಿತು. ಕನ್ಯಾವ್ಯಾಮೋಹದಿಂದ ಪೀಡಿತನಾದ ವಿಷ್ಣುವರ್ಧ ನನು ಪ್ರಯತ್ನದಿಂದ ಪ್ರಾಣಧಾರಣೆಮಾಡಿಕೊಂಡಿದ್ದನು. ಕನ್ನಿ ಕೆಯ ಸಹಿತವಾಗಿ ಪುಷ್ಯಮಾಸದಲ್ಲೇ ನಗರಸ್ಥರನ್ನು ಕರೆತರ ಬೇಕೆಂದು ದೂತರನ್ನು ಕಳುಹಿಸಿದನು. ಬಹು ವಾಚಾಳರೂ ನೀತಿಜ್ಞರೂ ಮಿಥ್ಯಾವಚನ ಪಟುಗಳೂ ಭಾವಜ್ಞರೂ ಆದ ಐವತ್ತು ಜನ ವಣಿಜರು ಧೈರ್ಯದಿಂದ ರಾಜಮಹೇಂದ್ರಕ್ಕೆ ಪ್ರಯಾಣಮಾಡಿ ದರು. ರಾಜದ್ವಾರದಲ್ಲಿ ನಿಂತು—ಭೈರವ, ಅಂಬೇಶ, ಸೋಮೇಶ, ತ್ರಿನೇತ್ರ, ವೃಷಭ ನಾಮಾಭಿದರಾದ ಅಧಿಕಾರಿಗಳ ಮುಖೇನ ಮಹಾರಾಜನಿಗೆ ತಾವು ಬಂದಿರುವ ಸಂಗತಿಯನ್ನು ತಿಳಿಸಿದರು. ಒಡ ನೆಯೇ ರಾಜನು ಶಯ್ಯೆಯಿಂದೆದ್ದು ಮಾನ್ಯಬಂಧುಗಳನ್ನು ದ್ವಾರದಲ್ಲಿ ತಡೆದಿರೇಕೆ? ಅವರನ್ನು ಮರ್ಯಾದೆಯಿಂದ ಆಸ್ಥಾನಕ್ಕೆ ಕರೆತನ್ನಿ'

ಎಂದು ಆಜ್ಞೆಮಾಡಿದನು. ಅಧಿಕಾರಿಗಳು ವಣಿಕ್ಪ್ರಮುಖರನ್ನು ರಾಜದರ್ಬಾರಿನಲ್ಲಿ ಉಚಿತಾಸನಗಳಲ್ಲಿ ಕುಳ್ಳಿರಿಸಿದರು. ವಿಷ್ಣುವರ್ಧನನು ಸುಗಂಧ ಲಿಪ್ತಾಂಗನಾಗಿ ಚಿತ್ರಾಂಬರಗಳನ್ನು ಧರಿಸಿ, ರತ್ನಾಭರಣಗಳಿಂದಲೂ ರತ್ನಕಿರೀಟದಿಂದಲೂ ವಿರಾಜಿತನಾಗಿ ಅನರ್ಘ್ಯವಾದ ಡೋಲಾಸನದಲ್ಲಿ ಬಂದು ಕುಳಿತನು. ಲಾಟ ಮಗಧ ಚೋಳ ವಂಗ ವಿದರ್ಭ ದ್ರಾವಿಡ ಕಳಿಂಗ ಸಿಂಧು ಪಾಂಚಾಲ ಕಾಶ್ಮೀರ ಸೌರಾಷ್ಟ್ರ ಸಾಲ್ವ ಯವನ ಕಿರಾತ ದೇಶಾಧಿಪತಿಗಳು, ಛತ್ರ ವ್ಯಜನ ಚಾಮರ ವೇತ್ರಪಾಣಿಗಳಾಗಿ ರಾಜನನ್ನು ಕೈವಾರಿಸಿದರು. ಸಮುಖದಲ್ಲಿ ಗಾನರಸಿಕರು ದಿವ್ಯಗಾಯನ ಮಾಡಿದರು. ಉಭಯ ಪಾರ್ಶ್ವಗಳಲ್ಲಿ ಕವೀಶ್ವರರು ಪೌರಾಣಿಕರು ಜ್ಯೋತಿಷ್ಕರು ಮಂತ್ರಿಗಳು ಪುರೋಹಿತರು ರಾಜಕುಲ ವೀರರು ಉಚಿತಾಸನಗಳಲ್ಲಿ ಕುಳಿತಿದ್ದರು.

ವೈಶ್ಯಪ್ರಮುಖರು ಸಭಾಮರ್ಯಾದೆಯಂತೆ ಸಮಯವನ್ನು ಸಾಧಿಸಿ ರಾಜನೆದುರಿಗೆ ಬಂದು ಅನರ್ಘ್ಯ ರತ್ನಗಳನ್ನೂ ದಿವ್ಯ ವಸ್ತ್ರಗಳನ್ನೂ ಅಮಿತ ಕಾಣಿಕೆಗಳನ್ನೂ ಮುಂದಿಟ್ಟು ವಿನಯದಿಂದ ನಮಸ್ಕಾರ ಮಾಡಿದರು.-'ಮಹಾಪ್ರಭೋ! ಭೂತಕಾಲದಲ್ಲಾಗಲಿ ವರ್ತಮಾನ ಕಾಲದಲ್ಲಾಗಲಿ ತಮ್ಮಂತೆ ಮಹದೈಶ್ವರ್ಯವಂತರಾದ ರಾಜರು ಅವತರಿಸಲಿಲ್ಲವು. ತಮ್ಮಂತೆ ಧರ್ಮಪರಾಯಣರೂ ಪ್ರಜಾರಂಜನ ಚತುರರೂ ಶಿವಪೂಜಾ ಧುರಂಧರರೂ ಆದ ಮತ್ತೊಬ್ಬ ರಾಜರು ಭೂತಲದಲ್ಲಿಲ್ಲವು. ವರ್ಣಾಶ್ರಮ ಧರ್ಮಗಳನ್ನು ಸಾಂಕರ್ಯವಾಗದಂತೆ ಪಾಲಿಸಿಕೊಂಡು ಬರುವದು ಚಂದ್ರವಂಶೋದ್ಭವರಾದ ತಮ್ಮ ಪಾಲಿಗೆ ಬಂದಿರುವದು. ತಮ್ಮ ಆಶ್ರಿತರಾದ ವಣಿಜರನ್ನು ಯಾವಾಗಲೂ ಕೃಪಾದೃಷ್ಟಿಯಿಂದ ನೋಡಿ ಕಾಪಾಡಬೇಕು' ಎಂದು ಸ್ತೋತ್ರಮಾಡಿದರು.

ರಾಜನು ತನ್ನನ್ನು ವಿವಾಹಕ್ಕೆ ಕರೆಯಲು ಬಂದರೆಂದೇ ಭಾವಿಸಿ

ದನು. ವೈಶ್ಯರನ್ನು ಕುರಿತು—'ವಿವಾಹಕಾಲವು ಸನ್ನಿಹಿತವಾಯಿತು. ಮಹಾದ್ರಿಗೆ ಈಗಲೇ ಪ್ರಯಾಣ ಮಾಡೋಣ. ವಿವಾಹಕ್ಕೆ ಬೇಕಾದ ಸಾಮಗ್ರಿಯಗಳು ನಿಮ್ಮಲ್ಲಿ ಸಿದ್ಧವಾಗಿರದಿದ್ದರೆ ಇಲ್ಲಿಂದಲೇ ವಸ್ತ್ರ ಭೂಷಣಗಳನ್ನೂ ಕಸ್ತೂರಿ ಮೊದಲಾದ ಸುಗಂಧ ದ್ರವ್ಯಗಳನ್ನೂ ತೆಗೆದುಕೊಂಡು ಹೋಗಬಹುದು' ಎಂದು ಹೇಳಿದನು. ರಾಜನ ಮಾತುಗಳನ್ನು ಶಾಂತಿಯಿಂದ ಕೇಳಿ ಮೌದ್ಗಲ್ಯನಾಭೀಲ ಗೋತ್ರ ಸಂಭವರಾದ ಹಿರಿಯರು ಭೀತಿಯನ್ನು ಬಿಟ್ಟು-'ಮಹಾರಾಜ! ಇದು ವರೆಗೆ ಎಷ್ಟೋಮಂದಿ ರಾಜರಾದರು. ವೈಶ್ಯವಂಶದಲ್ಲಿ ಯಾರೂ ವಿವಾಹಮಾಡಿಕೊಳ್ಳಲಿಲ್ಲ. ಸಂಪ್ರದಾಯ ವಿರೋಧಕಾರ್ಯದಲ್ಲಿ ಏಕೆ ವೃಥಾ ಪ್ರಯತ್ನಮಾಡುವೆ? ಕಲಿಯುಗದಲ್ಲಿ ಮಿಶ್ರವಿವಾಹವು ಗರ್ಹಿತವಾಗಿರುವದೆಂದು ಕೇಳುತ್ತೇವೆ. ಶಾಸ್ತ್ರಜ್ಞರಾದ ಪಂಡಿತರು ಯಾವ ಶಾಸ್ತ್ರದಲ್ಲಿ ರಾಜರಿಗೆ ವಣಿಕ್ಕನ್ಯೆಯ ವಿವಾಹವಾಗಬಹುದೆಂದು ಪ್ರಮಾಣವಿರುವದೋ ತಿಳಿಸಲಿ. ಆಗಬಾರದ ಕೆಲಸದಲ್ಲಿ ಕೈಹಾಕು ವದರಿಂದ ರಾಜವಂಶದ ಕೀರ್ತಿಗೆ ಕಳಂಕಬರುವದು. ಈ ಯೋಚನೆ ಯನ್ನು ಬಿಟ್ಟುಬಿಡು' ಎಂದು ಹಿತಬೋಧನೆ ಮಾಡಿದರು.

ವಿಷ್ಣುವರ್ಧನನು ವೈಶ್ಯರನ್ನು ನೋಡಿ ಹಲ್ಲು ಕಡಿಯುತ್ತಾ, -'ಮತ್ತೆ ಮತ್ತೆ ಇದೇ ಮಾತನ್ನೇ ಆಡುವಿರಾ? ಮಹಾದ್ರಿಯಲ್ಲಿ ಮಾ ಡಿದ ನಿಬಂಧನೆಯೇನು? ಈಗಾಡುವ ಮಾತೇನು? ಸುಮಗುಪ್ತ ನನ್ನು ಪ್ರಸನ್ನೀಕರಿಸುವೆವೆಂದು ನೀವು ಹೇಳಲಿಲ್ಲವೋ? ನನ್ನ ಧರ್ಮ ವಿರೋಧಿಯಾದರೂ ಸಹಿಸಿ ನಿಮಗೆ ಜನಾರ್ದನ ದೇವರ ಪೂಜೆಗೆ ನಾನು ಅವಕಾಶಮಾಡಿಕೊಡಲಿಲ್ಲವೊ? ನಿಮ್ಮ ಭೂತವೇಷಗಳನ್ನು ನಾನು ಮನ್ನಿಸಲಿಲ್ಲವೊ? ನೀವು ಕನ್ಯಾಪ್ರದಾನ ವಿಚಾರದಲ್ಲಿ ಪ್ರಮಾ ಣಮಾಡಲಿಲ್ಲವೊ! ನೀವು ಗುಣಸಾಧ್ಯರಾಗಿ ಕಾಣುವದಿಲ್ಲ. ನಿಮ್ಮನ್ನು ದಂಡಿಸುವದೇ ಧರ್ಮವು. ನೀವು ವಿಶ್ವಾಸಘಾತುಕರು. ಐಶ್ವರ್ಯ

ಮದೋನ್ಮತ್ತರು. ನಿಮ್ಮನ್ನೂ ನಿಮ್ಮ ಪಟ್ಟಣವನ್ನೂ ನಾಶಮಾಡಿ ಕನ್ನಿಕೆಯ ಸಹಿತವಾಗಿ ನಿಮ್ಮ ಸಕಲೈಶ್ವರ್ಯವನ್ನೂ ಸೂರೆಮಾಡಿ ತರುವೆನು. ಈಗಲೂ ನಿಮ್ಮ ನಿಶ್ಚಯವೇನಿರುವದೋ ತಿಳಿಸಿರಿ' ಎಂದು ಸಿಂಹನಾದ ಮಾಡಿದನು. ವಣಿಜರನ್ನು ದಹಿಸುವನಂತೆ ನಿಟ್ಟಿಸಿನೋಡಿದನು. ಮಹಾಪ್ರಧಾನನು ರಾಜನಿಗಿಂತ ಇಮ್ಮಡಿಯಾದ ಕೋಪದಿಂದ ಜ್ವಲಿಸುತ್ತಾ, ವಣಿಜರನ್ನು ತಿರಸ್ಕಾರ ದೃಷ್ಟಿಯಿಂದ ನೋಡುತ್ತಾ - 'ಕೇಳಿ ವಣಿಜರೆ! ನಿಮಗಿದು ಕಡೆಯಮಾತು! ನಿಮಗಿದು ಕಡೆಯ ಬುದ್ಧಿವಾದ! ಬುದ್ಧಿಶೂನ್ಯರಾಗಿ ಬೆಂಕಿಯೊಡನೆ ಹೋರಾಡುತ್ತಿರುವಿರಿ! ಮಹಾರಾಜನ ಶಾಂತಿಯ ಪರಮಾವಧಿಯನ್ನು ಪರೀಕ್ಷಿಸುತ್ತಿರುವಿರಿ! ಮಹಾರಾಜನು ನಿಮ್ಮನ್ನು ಸಮ್ಮುಖದಲ್ಲಿ ರಾಜಬಂಧುಗಳಂತೆ ಸನ್ಮಾನಿಸಿದುದು ತಪ್ಪಾಯಿತು. ಆಗಲೇ ನಿಮ್ಮನ್ನು ಚೋರಶಾಲೆಯಲ್ಲಿ ಬಂದನದಲ್ಲಿಟ್ಟು ನಗರವನ್ನು ಸುಟ್ಟು ಕನ್ನಿಕೆಯನ್ನು ತರದೇ ಹೋದದ್ದು ತಪ್ಪಾಯಿತು. ವಣಿಜರನ್ನು ವಧಿಸಬಾರದೆಂದು ದಯೆಯನ್ನು ತೋರಿಸಿದ್ದು ತಪ್ಪಾಯಿತು. ನೀವೇನು ರಾಜಸಂತತಿಯನ್ನು ನಿಮಗಿಂತ ಹೀನ ಸಂತತಿಯೆಂದು ತಿಳಿದಿರೊ? ಕ್ಷತ್ರಿಯನು ವೈಶ್ಯಕನ್ಯಾರ್ಹನಲ್ಲವೊ? ಈಗಲೂ ಮಹಾರಾಜನಿಗೆ ಕನ್ನಿಕೆ ಕೊಡುವದರಿಂದ ನಿಮ್ಮ ಕುಲಕೋಟಿಯು ಪಾವನವಾಗುವದೆಂದು ತಿಳಿಯಿರಿ. ಕನ್ನಿಕೆಯು ಶುದ್ಧಳಾಗುವಳೆಂದು ತಿಳಿಯಿರಿ. ಏನು ಮಾಡಿದರೂ ರಾಜನು ಕನ್ನಿಕೆಯನ್ನು ಬಿಡುವನಲ್ಲ. ಧರ್ಮಶಾಸ್ತ್ರದಲ್ಲಿ ರಾಜರಿಗೆ ಎಂಟು ವಿಧವಾದ ವಿವಾಹವು ವಿಹಿತವಾಗಿರುವದು. ಕನ್ಯಾಹರಣವು ರಾಕ್ಷಸ ವಿವಾಹವಾಗುವದರಿಂದ ಅದೂ ರಾಜರ ಧರ್ಮವೇ ಆಗುವದು. ರಾಜರಾಜನಾದ ವಿಷ್ಣುವರ್ಧನನು ವೈಶ್ಯರಹಿತ ಪೃಥ್ವಿಯನ್ನಾಗಿ ಮಾಡಲು ಸಮರ್ಥನಾಗಿರುವನು. ಕುಲನಾಶಕವಾದ ಪಾಪನೀತಿಯನ್ನು ಬಿಟ್ಟು ರಾಜಾಜ್ಞೆಯನ್ನು ಪಾಲಿಸಿರಿ. ರಾಜಾಜ್ಞೆಯಂತೆ ನಡೆಯುವದರಿಂದ ನಿಮಗೆ ಇಹಪರ ಸಾಧ

ನೆಗಳುಂಟು. ಮಹಾರಾಜನಿಗೆ ಕನ್ನಿಕೆಯನ್ನೊಪ್ಪಿಸಿ ಶರಣಾಗತರಾಗಿರಿ' ಎಂಬದಾಗಿ ಜಬರಿಸಿದನು.

ವೈಶ್ಯರು ಕಠಿಣ ವಾಕ್ಯಗಳಿಂದವಮಾನಿತರಾಗಿ ತಮ್ಮ ಪೀಠಗಳಿಂದೆದ್ದರು. ಮಹಾರಾಜನನ್ನು ಸಂಬೋಧಿಸಿ—'ನರಪತಿಯೇ, ಈಗ ನಾವೂ ನಮ್ಮ ಕಡೆಯ ತೀರ್ಮಾನವನ್ನು ಹೇಳುವೆವು. ವರ್ಣಾಶ್ರಮ ಧರ್ಮವನ್ನು ರಕ್ಷಿಸುವುದು ನಿನ್ನಂಥ ಮಹಾರಾಜನಿಗೆ ಕರ್ತವ್ಯ. ಸ್ಮೃತಿನಿಷಿದ್ಧವಾದ ಮಿಶ್ರವಿವಾಹವನ್ನು ಬಲಾತ್ಕಾರದಿಂದ ಮಾಡಿಕೊಳ್ಳುವುದು ರಾಜವಂಶಕ್ಕೆ ಮರ್ಯಾದೆಯಲ್ಲ. ವೈಶ್ಯಕನ್ಯೆಯು ಪಟ್ಟಮಹಿಷಿಯಾಗುವದಿಲ್ಲ. ಆಕೆಯ ಪುತ್ರನು ರಾಜ್ಯಾರ್ಹನಾಗುವುದಿಲ್ಲ. ತತ್ಕಾಲದಲ್ಲಿ ಪ್ರಾಪ್ತವಾದ ಆಪನ್ನಿವಾರಣೆಗಾಗಿ ಆಪದ್ಧರ್ಮವನುಸರಿಸಿ ನಾವು ಅನೃತವಾಡಿದೆವು. ಪ್ರಾಣಗಳಿಗೆ ನಾವಂಜುವರಲ್ಲ. ವಾಸವಿಯು ಮನುಜಳಲ್ಲ. ಅವಳ ರೀತಿ ನೀತಿಗಳಿಂದಲೂ ನಮ್ಮ ಅನುಭವದಿಂದಲೂ ಆಕೆಯನ್ನು ಸಾಕ್ಷಾಲ್ಲಕ್ಷ್ಮಿಯೆಂದು ನಾವು ಪೂಜಿಸುವೆವು. ಲಕ್ಷ್ಮಿಯು ಮಹಾವಿಷ್ಣುವನ್ನಲ್ಲದೆ ಮರ್ತ್ಯರನ್ನು ಮದುವೆಮಾಡಿಕೊಳ್ಳುವಳಲ್ಲ. ಆಕೆಯನ್ನು ನಾವು ಶ್ರೀ ಜನಾರ್ದನನಿಗೆ ಸಮರ್ಪಿಸಿರುವೆವು. ಅವಳು ಅವನನ್ನೇ ವರಿಸುವಳು. ಸಕಲ ಮಾನವರಿಗೂ ಆಕೆಯು ಜನನಿಯು. ಸಕಲ ಮಂತ್ರಜ್ಞರಾದ ನಮ್ಮ ಆಚಾರ್ಯರು ವಾಸವಿಯನ್ನು ಮಹಾಲಕ್ಷ್ಮಿಯ ಅವತಾರವೆಂದು ಹೇಳಿರುವರು. ಅವರ ಮಹಿಮೆಯು ನಿನಗೂ ಅನುಭವವಾಗಿರುವುದು. ನೀನು ಕನ್ನಿಕೆಯನ್ನು ಬಯಸುವದು ಇಂದ್ರಾದಿ ದೇವತೆಗಳಿಗೋಸ್ಕರ ನಿರ್ಮಿತವಾದ ಅಮೃತವನ್ನು ಅಸುರರು ಬಯಸಿದಂತಾಗುವದು. ರಾಜಶೇಖರನಿಗೆ ರಚಿತವಾಗಿರುವ ಶಯ್ಯೆಯನ್ನು ಚಂಡಾಲನು ಬಯಸಿದಂತಾಗುವದು. ಹಿಂದೆ ನೀತಿಬಾಹಿರನಾದ ರಾವಣನು ಸೀತೆ

ಯನ್ನು ಬಯಸಿ ಭಸ್ಮೀಭೂತನಾದನು. ಲಕ್ಷ್ಮೀಸ್ವರೂಪಳಾದ ರುಕ್ಮಿಣೀದೇವಿಯನ್ನು ಬಯಸಿ ಶಿಶುಪಾಲನು ನಾಶವಾದನು. ನಿನಗೆ ಚಂದ್ರವಂಶೋದ್ಭವನೆಂಬ ಗರ್ವವಿರುವದು. ಪಾಪಿಗಳಿಗೆ ವಂಶೋನ್ನತಿಯು ಸಾಧಕವಾಗುವದಿಲ್ಲ. ರಾವಣನು ಪುಲಸ್ತ್ಯವಂಶದಲ್ಲವತರಿಸಿದವನೇ! ವೈಶ್ಯರನ್ನು ಸಂಹರಿಸುವೆನೆಂದು ನೀನು ಹೆದರಿಸುತ್ತಿರುವಿ. ವೈಶ್ಯರು ಜೀವವನ್ನು ತೃಣಕ್ಕಿಂತ ಕಡೆಯಾಗಿ ಭಾವಿಸಿರುವರು. ವೈಶ್ಯರಿಗೆ ಜಾತಿಧರ್ಮರಕ್ಷಣೆಗಿಂತ ಪ್ರಾಣರಕ್ಷಣೆಯು ದೊಡ್ಡದಾಗಿಲ್ಲ. ನಿನ್ನ ವರ್ತನೆಯಿಂದ ಶಾಶ್ವತವಾದ ಅಪಕೀರ್ತಿ ಬರುವದು. ಸಮುದ್ರಗಳು ಬಾಡಿ ಕೆಸರಾದರೂ, ಆದಿಶೇಷನು ಹೊತ್ತಿರುವ ಭೂಮಿಯನ್ನು ಕೆಳಗುರುಳಿಸಿದರೂ, ಮೇರುಪರ್ವತವು ಭೂಮಿಯಲ್ಲಿ ಕುಸಿದುಬಿದ್ದರೂ, ನಾವು ನಿನಗೆ ಕನ್ನಿಕೆಯನ್ನು ಕೊಡುವದಿಲ್ಲ' ಎಂದು ಖಂಡಿತವಾಗಿ ನುಡಿದು ಹೊರಟುಹೋದರು.

ರಾಜನು ಅಸಹನೀಯವಾದ ವೈಶ್ಯರ ಮಾತನ್ನು ಕೇಳಿ ಜ್ವಲಿತನಾದನು. ಮಂತ್ರಿಗಳನ್ನು ಕರೆದು ಸಕಲ ಸೇನಾಸಹಿತರಾಗಿ ಯುದ್ಧಕ್ಕೆ ಹೊರಡಬೇಕೆಂದು ಅಪ್ಪಣೆಮಾಡಿದನು. ಭಾಸ್ಕರಾಚಾರ್ಯನ ಕಪಟತಂತ್ರಗಳಿಗೆ ಪ್ರತಿಕ್ರಿಯೆ ಮಾಡಲು ತಕ್ಕ ಮಾಂತ್ರಿಕರು ಸೈನ್ಯದ ಜೊತೆಯಲ್ಲಿರಬೇಕೆಂದು ತಿಳಿಸಿದನು. ಯಾತ್ರಾ ಮಂಗಳೋತ್ಸವಕ್ಕಾಗಿ ಅಂತಃಪುರವನ್ನು ಪ್ರವೇಶಿಸಿದನು.

ರಾಜನ ಉದ್ಧಟತನವನ್ನು ನೋಡಿ ರಾಜಪತ್ನಿಯರು ದುಃಖಿತರಾದರು. ತತ್ಕಾಲದಲ್ಲಾದ ದುರ್ನಿಮಿತ್ತಗಳಿಂದವರು ಭೀತರಾದರು. ಪಟ್ಟಮಹಿಷಿಯು ಧೈರ್ಯತಾಳಿ ರಾಜನಿಗೆ ಹಿತೋಕ್ತಿಗಳನ್ನು ಹೇಳಲಾರಂಭಿಸಿದಳು:—

"ಮಹಾರಾಜನೆ, ಸಕಲ ಜಂತುಗಳೂ ಬ್ರಹ್ಮನಿಂದ ನಿರ್ಮಿತವಾದವು. ಪ್ರಜಾವೃದ್ಧಿಯಾಗಬೇಕೆಂದು ಸ್ತ್ರೀ ಪುಂಭೇದಗಳಾದವು. ಸ್ತ್ರೀಪುರುಷ ಪ್ರಾಣಿಗಳ ಸಂಬಂಧದಿಂದ ಪ್ರಜಾವೃದ್ಧಿಯು ಜಗತ್ತಿನಲ್ಲಿ ಕಂಡುಬರುತ್ತಿದೆ. ಪ್ರಜಾರ್ಥವಾಗಿ ಸ್ತ್ರೀಪುರುಷರಲ್ಲಿ ಶುಕ್ಲಶೋಣಿತಗಳು ಸನ್ನಿಹಿತವಾಗಿರುವವು. ಋತುಕಾಲವು ಸ್ತ್ರೀಯರಿಗೆ ಗರ್ಭಧಾರಣಾ ಕಾಲವೆನಿಸುವದು. ಮೃಗಾದಿಗಳಲ್ಲೂ ಋತುಕಾಲದಲ್ಲೇ ಸ್ತ್ರೀಪುರುಷ ಸಂಯೋಗವಾಗುವದು. ಆ ಸಮಯಗಳಲ್ಲಿ ಶುಕ್ಲವಿಕ್ಷೇಪವು ಭ್ರೂಣಹತ್ಯವೆನಿಸುವದು. ಋತುಕಾಲದಲ್ಲಿ ಸ್ವಸ್ತ್ರೀಯರನ್ನು ಬಿಟ್ಟು ಹೋಗುವದು ಪಾಪವೆನಿಸುವದು. ಋತುಕಾಲದ ಸ್ತ್ರೀಪುರುಷ ಸಂಬಂಧವು ಬ್ರಹ್ಮಚರ್ಯವೆಂದೇ ಕರೆಸಿಕೊಳ್ಳುವದು. ಅತ್ಯಂತ ಪೂರ್ವಕಾಲದಲ್ಲಿ ಮನುಷ್ಯರಲ್ಲಿ ವಿವಾಹ ಪದ್ಧತಿಯಿರಲಿಲ್ಲ. ಸ್ತ್ರೀ ನಿಮಿತ್ತವಾಗಿ ಪುರುಷರು ಕಲಹಮಾಡುವದನ್ನು ಕಂಡು ಮನುವು ವಿವಾಹ ನಿರ್ಣಯಮಾಡಿದನು. ತದಾಪ್ರಭೃತಿ ಪುರುಷರಿಗೆ ಸ್ವಸ್ತ್ರೀರತಿಯು ವಿಹಿತವಾಗಿರುವದು. ಪರಸ್ತ್ರೀ ಸಂಗದಿಂದ ಕುಲನಾಶವಾಗುವದು. ನಿನಗಾದರೋ ಬೇಕಾದಷ್ಟು ಪತ್ನಿಯರಿರುವರು. ರೂಪಲಕ್ಷಣ ಸಂಪನ್ನೆಯರಾಗಿರುವರು. ಸಂಗೀತ ರಸಿಕರಾಗಿರುವರು. ಕಳಾಶಾಸ್ತ್ರವಿಶಾರದರಾಗಿರುವರು. ಇಂಥಾ ಪತ್ನಿಯರನ್ನು ಋತುಕಾಲದಲ್ಲಿ ಬಿಟ್ಟು ಓರ್ವ ವೈಶ್ಯ ಸ್ತ್ರೀ ನಿಮಿತ್ತವಾಗಿ ಮಾಡುತ್ತಿರುವ ಯುದ್ಧಬುದ್ಧಿಯು ಅಯಶಸ್ಕರವು. ಯುದ್ಧದಲ್ಲಿ ಜಯಾಪಜಯಗಳನ್ನು ನಿರ್ಣೈಸುವದಕ್ಕಾಗುವದಿಲ್ಲ. ವೈಶ್ಯರನ್ನು ಜೈಸುವದರಿಂದಾಗಲಿ ಸಂಹ

ರಿಸುವದರಿಂದಾಗಲಿ ಲಾಭವಿಲ್ಲ ; ಕೀರ್ತಿಯಿಲ್ಲ ; ಪುಣ್ಯವಿಲ್ಲ. ವೈಶ್ಯರಿಂದ ಪರಾಜಯುವಾದರೆ ಮಾತ್ರ ಕ್ಷತ್ರಿಯ ಕುಲಕ್ಕೆ ಅಪಕೀರ್ತಿಯುಂಟಾಗುವದು. ಸ್ತ್ರೀ ನಿಮಿತ್ತ ಮರಣವಾದರೆ ನರಕಪ್ರಾಪ್ತಿಯಾಗುವದು. ಕನ್ನಿಕೆಯ ಹಂಬಲನ್ನು ಬಿಡು. ಯಶೋವಂತನಾಗು" ಎಂದು ಪ್ರಾರ್ಥಿಸಿದಳು.

ಮಹಾರಾಣಿಯ ಮಾತು ಮಹಾರಾಜ ವಿಷ್ಣುವರ್ಧನನಿಗೆ ವಿಷಪ್ರಾಯವಾಯಿತು. ಕನ್ಯಾವ್ಯಾಮೋಹವವನಿಗೆ ತಪ್ಪಲಿಲ್ಲ. ಯುದ್ಧೋದ್ಯೋಗವನ್ನವನು ಬಿಡಲಿಲ್ಲ.

ರಾಜಸಭೆಯಿಂದ ಹೊರಟ ವೈಶ್ಯಪ್ರಮುಖರು ರಾಜ್ಯಾಧಿಕಾರಿಗಳನ್ನೂ ಜ್ಯೋತಿಷ್ಕರನ್ನೂ ಪುರೋಹಿತರನ್ನೂ ಕಂಡು, ಪ್ರಯಾಣದಲ್ಲಿ ಆದಷ್ಟು ಕಾಲಹರಣಮಾಡುವಂತೆ ಬೇಡಿಕೊಂಡು, ಅವರೆಲ್ಲರಿಗೂ ಯಥೇಷ್ಟ ದ್ರವ್ಯದಾನಮಾಡಿ ಮಹಾದ್ರಿಪುರಿಯನ್ನು ಸೇರಿದರು.

ಇಲ್ಲಿಗೆ ಐದನೇ ಅಧ್ಯಾಯ ಮುಗಿದುದು.



# ಆರನೆಯ ಅಧ್ಯಾಯ



ರಾಜಮಹೇಂದ್ರಕ್ಕೆ ಹೋಗಿಬಂದ ವೈಶ್ಯಪ್ರಮುಖರು ರಾಜಸಭೆಯಲ್ಲಿ ನಡೆದ ವೃತ್ತಾಂತವನ್ನು ಭಾಸ್ಕರಾಚಾರ್ಯರಿಗೆ ತಿಳಿಸಿದರು. ಏಳನೂರ ಹದಿನಾಲ್ಕು ಗೋತ್ರದ ಮುಖಂಡರು ಕಡೆಯ ತೀರ್ಮಾನವನ್ನು ನಿರ್ಧರಿಸಲು ಮತ್ತೆ ಜನಾರ್ದನ ದೇವಾಲಯದಲ್ಲಿ ಸಭೆ ಸೇರಿದರು. ಸುಮಗುಪ್ತನನ್ನು ಕರೆದು ರಾಜನು ಸೇನಾಸಮೇತನಾಗಿ ಬರುವ ವಿಷಾದ ಸಂಗತಿಯನ್ನು ತಿಳಿಸಿದರು. ಆದದ್ದಾಯಿತು, ದೇವರ ಸನ್ನಿಧಿಯಲ್ಲಿ ಈಗಲೂ ಒಂದೇ ಮನಸ್ಸಿನಿಂದ ನಿನ್ನ ಕಡೆಯ ನಿಶ್ಚಯವನ್ನು ಹೇಳಿಬಿಡೆಂದು ಗದ್ಗದ ಕಂಠರಾಗಿ ಕೇಳಿದರು. ಸುಮಗುಪ್ತನು ಸಕಲ ಬಾಂಧವರೂ ಪತ್ನೀಪುತ್ರ ಸಮೇತರಾಗಿ ರಾಜನ ಖಡ್ಗಕ್ಕೆ ತುತ್ತಾಗುವ ಕಾಲ ಬಂತೆಂಬ ವ್ಯಸನದಿಂದ ಕಂಠರೋಧವಾಗಲು ಪ್ರತ್ಯುತ್ತರ ಕೊಡಲಿಲ್ಲ. ಗೋತ್ರಪಾಲಕರು, -'ಇದೇನು ಕರ್ಮಕಥೆ! ಎಂದು ನಿನ್ನ ಮನೆಯಲ್ಲಿ ಕನ್ನಿಕೆಯು ಜನಿಸಿದಳೋ ಅಂದೇ ನಾವು ಮೃತರಾದೆವು; ನಿನ್ನಂತರಂಗವೇನಿರುವದೋ ಬಿಚ್ಚಿ ಹೇಳಿಬಿಡು' ಎಂದು ಖಂಡಿತವಾಗಿ ಕೇಳಿದರು.

ಸುಮಗುಪ್ತನು ಎದ್ದು ಸರ್ವರಿಗೂ ನಮಸ್ಕರಿಸಿ—'ಕುಲನಾಶವಾಗಬೇಕೆಂಬ ಅಪೇಕ್ಷೆ ನನಗಿಲ್ಲ. 'ಕುಲಾರ್ಥಮೇಕ ಮುತ್ಸೃಜ್ಯ ಕ್ಯಲಂ ರಕ್ಷಂತಿಸಾಧವಃ' ಎಂಬ ಶಾಸ್ತ್ರವಚನದಂತೆ ಕುಲೀನರಾದ ತಾವು ನನ್ನೊಬ್ಬನನ್ನು ಬಿಟ್ಟು ಕುಲಸಂತತಿಯನ್ನು ರಕ್ಷಿಸಿರಿ. ನಾನು ಜಲಾಗ್ನಿವಿಷಪಾಶಗಳಿಂದ ಪ್ರಾಣತ್ಯಾಗ ಮಾಡುವೆನು. ವೈಶ್ಯ

ಕುಲಪ್ರವೀಣರೂ ಮಾನಾರ್ಥಿಗಳೂ ಆದ ಸಭಾಸದರು ನನ್ನ ಪ್ರತಿಜ್ಞೆಯನ್ನು ಕೃಪೆಯಿಟ್ಟು ಕೇಳಿರಿ.

## ಸುಮಗುಪ್ತ ಪ್ರತಿಜ್ಞಾ

'ಸಕಲ ಮಾನವರಿಗೂ ಆಚಾರವು ಪ್ರಥಮ ಧರ್ಮವು. ಧರ್ಮಕ್ಕೆ ಸ್ವಾಮಿಯು ಅಚ್ಯುತನು. ಸ್ವಧರ್ಮಕ್ಕಾಗಿ ನಾನು ದೇಹತ್ಯಾಗ ಮಾಡುವೆನು. ಧರ್ಮಕ್ಕಾಗಿ ದೇಹತ್ಯಾಗ ಮಾಡುವದು ಪಾಪವಲ್ಲ. ಸದ್ವರ್ತನವೆಂಬ ಭಸ್ಮದಿಂದ ವೈಶ್ಯಕುಲದರ್ಪಣದ ಕಾಂತಿಯನ್ನು ಜ್ವಲಗೊಳಿಸುವೆನು. ಕನ್ನಿಕೆಯು ಸತ್ಯವಾಗಿ ಮಾನವಳಲ್ಲ. ನಡೆನುಡಿಗಳಿಂದವಳು ಮಹಾಲಕ್ಷ್ಮೀ ಸ್ವರೂಪಳೆಂದು ನಿಶ್ಚಿತವಾಗಿರುವದು. ಅಪರೋಕ್ಷಿಗಳಾದ ಭಾಸ್ಕರಾಚಾರ್ಯರು ಆಕೆಯ ಮಹಿಮೆಯನ್ನು ನನಗೆ ತಿಳಿಸಿರುವರು. ಆಕೆಯು ತೋರಿಸಿದ ವಿಭೂತಿ ರೂಪದಿಂದ ನನ್ನ ನಂಬಿಕೆಯು ಮತ್ತಷ್ಟು ದೃಢವಾಯಿತು. ಕನ್ನಿಕೆಯನ್ನು ವಿಧಿವತ್ತಾಗಿ ಶ್ರೀ ಜನಾರ್ದನನಿಗೆ ಸಮರ್ಪಣೆ ಮಾಡಿ ನಾವು ದಂಪತಿಗಳು ದೇಹತ್ಯಾಗಮಾಡುವೆವು. ಸರ್ವ ಬಂಧುಗಳೂ ನನ್ನ ಸಾಹಸದ ಮಾತನ್ನು ಕ್ಷಮಿಸಬೇಕು. ನನ್ನ ಮರಣಕ್ಕೆ ಆಜ್ಞೆಯನ್ನು ಕೊಡಬೇಕು.'

ಸಭಾಸದರು ಸುಮಗುಪ್ತನ ಮಾತಿನಿಂದ ಜರ್ಝರಿತರಾದರು. ಅವನ ದೃಢಸಂಕಲ್ಪಕ್ಕೆ ತಲೆದೂಗಿದರು. ಸಂಶಯಾತ್ಮರು ಆ ಸಭೆಯಲ್ಲಿ ಬಹಳವಾಗಿದ್ದರೂ ಪ್ರತಿಮಾತಾಡುವ ಧೈರ್ಯವು ಅವರಿಗೆ ಬರಲಿಲ್ಲ.

ಧರ್ಮಾಭಿಮಾನಿಗಳು,-'ವೃದ್ಧಪಿತಾಮಹ, ಏನು ಮಾತಾಡುವೆ? ನಿನ್ನನ್ನು ಬಲಿಕೊಟ್ಟು ನಾವು ಕುಲಾಂಗಾರರೆನಿಸುವೆವೆ? ನೀನು ಹೀಗೆನ್ನಬಾರದು. ಶ್ರೀಹರಿಯು ನಿನಗೆ ಹೇಗೆ ದೈವವೋ ಹಾಗೆ ನಮಗೂ ದೈವವು ನಿನ್ನ ನಿಧನಮಾತ್ರದಿಂದ ಕುಲವೆಂದಿಗೂ ಉಳಿಯುವದಿಲ್ಲ ವಂಚನೆಯಿಂದ ವೃದ್ಧದಂಪತಿಗಳನ್ನು ಸಂಹರಿಸಿ ಕನ್ನಿಕೆಯನ್ನು ಕೊಡದೇ ಹೋದರೆಂದು ರಾಜನು ಕ್ರುದ್ಧನಾಗಿ ವೈಶ್ಯಕುಲವನ್ನೇ ಧ್ವಂಸಮಾಡುವನು. ಕನ್ನಿಕೆಯನ್ನು ಮಹಾರಾಜನಿಗೆ ವಿವಾಹ ಮಾಡಿಕೊಡುವ ಉಪಾಯವೊಂದರ ವಿನಾ ಕುಲವೆಂದಿಗೂ ಉಳಿಯುವದಿಲ್ಲ. ಕುಲಾಚಾರವನ್ನು ಮೀರಿ ಜೀವಿಸುವದು ಮಾನವಂತರಿಗೆ ಮಾನವಲ್ಲ. ಹೇಗೂ ಸರ್ವನಾಶಕಾಲವೇ ಬಂದಿರುವದು. ಶುಭವಾಗಲಿ ಅಶುಭವಾಗಲಿ ಎಲ್ಲರೂ ಅನುಭವಿಸಬೇಕು. ಪ್ರಾಣಭೀತಿಯಿಂದ ವಿಷ್ಣುವರ್ಧನನಿಗೆ ಕನ್ನಿಕೆಯನ್ನು ಕೊಡಬೇಕಾದುದಿಲ್ಲ. ಕುಲಮರ್ಯಾದೆಯನ್ನು ಮೀರಿ ಬಾಳಬೇಕಾದುದಿಲ್ಲ. ಕುಲಕ್ಕೆ ಮರ್ಯಾದೆಯನ್ನು ಕೊಟ್ಟು ಲೋಕತ್ರಯದಲ್ಲೂ ಕೀರ್ತಿವಂತರಾಗೋಣ ನಿನ್ನೊಡನೆ ನಾವೂ ಪ್ರಾಣವನ್ನು ತೃಣಪ್ರಾಯವಾಗಿ ತಿಳಿದು ಸಾಯಲು ಸಿದ್ಧರಾಗಿರುವೆವು. ಈ ವಿಷಮ ಸ್ಥಿತಿಯು ದೈವಿಕವಾಗಿ ಪ್ರಾಪ್ತವಾಗಿರುವದು. ಆಗಲಿ; ಬಂದದ್ದೆಲ್ಲಾ ಬರಲಿ. ಶ್ರೀ ಜನಾರ್ದನನ ದಯ ನಮಗಿರಲಿ' ಎಂಬದಾಗಿ ನಿಶ್ಚಯಿಸಿ, ಗೋತ್ರಪಾಲಕರು ಮತ್ತೆ—

'ಯಾರಿಗೆ ಜನಾರ್ದನ ಕೋನ ಕಮಲಾದೇವಿಯರೂ, ನಗರೇಶ್ವರ ವಿಂಧ್ಯವಾಸಿನಿಯರೂ, ಭಾಸ್ಕರಾಚಾರ್ಯರೂ ಧರ್ಮವೂ ಕೀರ್ತಿಯೂ ಸದಾಚಾರವೂ ಬೇಕೋ ಅಂಥವರು ಕುಸುಮಗುಪ್ತನೊಡನೆ ದೇಹತ್ಯಾಗಮಾಡಲು ಸಿದ್ಧರಾಗಬಹುದು. ಯಾರಿಗೆ ಒಂದೂ ಬೇಡವೋ ಅಂಥವರು

ಮನಬಂದಂತೆ ನಮ್ಮನ್ನು ಬಿಟ್ಟು ಬೇಕಾದ ಬಳಿಗೆ ಹೋಗಬಹುದು' ಎಂದು ಗರ್ಜನೆಮಾಡಿ ಸಭೆಯನ್ನು ಮುಗಿಸಿದರು.

ಆಚಾರ್ಯರು ಸುಮಗುಪ್ತನ ಪ್ರತಿಜ್ಞೆಯನ್ನೂ ಗೋತ್ರಪಾಲಕರ ನಿಬಂಧನೆಯನ್ನೂ ಕೇಳಿ ಸಂತುಷ್ಟರಾದರು. ವಿಶ್ವಾಸವಂತರಾದ ವೈಶ್ಯಕುಲ ತಿಲಕರನ್ನು ಕರೆದು, ಸತ್ಯವೂ ಪಾಪಭೇದಕವೂ ಆದ ಕನ್ನಿಕೆಯ ಅವತಾರ ಕಾರಣವನ್ನು ಹೇಳಲಾರಂಭಿಸಿದರು.



## ಕನ್ಯಕಾವತಾರ ವೃತ್ತಾಂತ

ಶ್ರೋತೃಗಳೆ, ಶ್ರವಣಮಾಡಿ:—

ಪೂರ್ವದಲ್ಲಿ ಪಾಂಡ್ಯದೇಶದಲ್ಲಿ ವಿಷ್ಣುಚಿತ್ತನೆಂಬ ಬ್ರಾಹ್ಮಣನಿದ್ದನು. ಸದಾ ವಿಷ್ಣುಚಿಂತನೆಯಲ್ಲಿ ಆಸಕ್ತನಾಗಿದ್ದುದರಿಂದ ಅವನಿಗೆ ಆ ಹೆಸರಾಯಿತು. ಅವನು ಒಂದು ಪುಷ್ಪೋದ್ಯಾನಮಾಡಿಕೊಂಡು ಮಾಲಿಕೆಗಳನ್ನು ಕಟ್ಟಿ ರಂಗನಾಥನಿಗೆ ಸಮರ್ಪಿಸುತ್ತಾ ತುಲಸೀವನದಲ್ಲಿ ವಾಸಮಾಡುತ್ತಿದ್ದನು. ಆತನಿಗೆ ದೈವಯೋಗದಿಂದ ಮಹಾಲಕ್ಷ್ಮಿಯು ಗೋದಾನಾಮಕಳಾಗಿ ಮಗಳಾದಳು. ದಿನೇ ದಿನೇ ಅಭಿವೃದ್ಧಳಾದ ಗೋದೆಯು ತಾನೂ ತಂದೆಯೊಡನೆ ರಂಗನಾಥದೇವಾಲಯಕ್ಕೆ ಹೋಗಿಬರುತ್ತಾ, ಪುಷ್ಪಕೈಂಕರ್ಯಮಾಡುತ್ತಾ ಗೋಪಿಯರು ಆಚರಿಸಿದ ಮಾರ್ಗಶೀರ್ಷ ವ್ರತವನ್ನಾಚರಿಸಿ, ಶ್ರೀರಂಗನಾಥನು ತನ್ನ ಪತಿಯೆಂದು ಭಾವಿಸಿ, ಸಖಿಯರಿಗೆ ದ್ರಾವಿಡಭಾಷೆಯಲ್ಲಿ ತಾನು ಮಾಡಿದ ಹಾಡುಗಳನ್ನು ಹೇಳಿಕೊಡುತ್ತಾ, ಸಂತೋಷದಿಂದಿದ್ದಳು. ಮಗಳಿಗೆ ವಿವಾಹಕಾಲ ಪ್ರಾಪ್ತವಾದುದನ್ನರಿತು ವಿಷ್ಣುಚಿತ್ತನು ವರಾನ್ವೇಷಣೆಗಾರಂಭಿಸಿದನು.

ಗೋದಾದೇವಿಯು ತಂದೆಯನ್ನು ಕುರಿತು—'ನನ್ನ ಪತಿಯು ರಂಗನಾಥನು. ನಾನು ಅನ್ಯರನ್ನು ಭಜಿಸುವಳಲ್ಲ. ಅನ್ಯರೊಡನೆ ಮಾತಾಡುವಳಲ್ಲ. ಅನ್ಯರನ್ನು ಆಶ್ರಯಿಸುವಳಲ್ಲ. ಪರಪುರುಷರ ಸ್ಪರ್ಶವನ್ನು ಪಾದದಿಂದಲೂ ಮಾಡುವಳಲ್ಲ. ನನ್ನ ಪ್ರಾಣಗಳು ರಂಗನಾಥನಿಗೆ ಸಮರ್ಪಿತವಾಗಿರುವವು. ನನ್ನ ಸ್ವರೂಪ, ನನ್ನ ಗತಿ, ನನ್ನ ಯುವ್ವನ, ನನ್ನ ಚರ್ಯೆಗಳೆಲ್ಲಾ ಶ್ರೀಮನ್ನಾರಾಯಣನಿಗೆ ಸೇರಿರುವವು. ನನಗೆ ವರಾನ್ವೇಷಣಮಾಡಿ ಪಾಪಕ್ಕೊಳಗಾಗಬೇಡ" ಎಂದು ಹೇಳಿದಳು.

ಈ ಮಾತಿನಿಂದ ವಿಷ್ಣುಚಿತ್ತನು ವಿಚಾರಪರನಾದನು. ಮಗಳ ಮಾತುಗಳೂ ಚರ್ಯವೂ ಅವನಿಗೆ ಆಶ್ಚರ್ಯವನ್ನುಂಟುಮಾಡಿದವು.

ವಿಷ್ಣುಚಿತ್ತನು ನಿತ್ಯವೂ ಪದ್ಧತಿಯಾಗಿ ವಿವಿಧ ಮಾಲಿಕೆಗಳನ್ನು ಕಟ್ಟಿ ಪರ್ಣಪೇಟಿಕೆಯಲ್ಲಿಟ್ಟು ಸ್ನಾನಾಹ್ನಿಕಗಳಿಗಾಗಿ ಉದ್ಯಾನದ ಸರೋವರಕ್ಕೆ ಹೋಗುತ್ತಿದ್ದನು. ಆ ಕಾಲದಲ್ಲಿ ಗೋದೆಯು ರಂಗನಾಥನಿಗೆ ಮೀಸಲಾದ ಮಾಲಿಕೆಗಳನ್ನು ತಾನೇ ಮೊದಲು ಅಲಂಕರಿಸಿಕೊಂಡು ಸ್ವಾಮಿಗೆ ತಾನು ಅರ್ಹಳಾಗಿರುವೆನೇ ಎಂದು ಕನ್ನಡಿಯಲ್ಲಿ ತನ್ನನ್ನು ನೋಡಿಕೊಂಡು ಆನಂದಪಟ್ಟು, ಮೊದಲಿನಂತೆ ಮಾಲಿಕೆಗಳನ್ನು ಪೆಟ್ಟಿಗೆಯಲ್ಲಿ ಸೇರಿಸಿಡುತ್ತಿದ್ದಳು. ಒಂದುದಿನ ಪದ್ಧತಿಗಿಂತ ಮುಂಚಿತವಾಗಿ ಬ್ರಾಹ್ಮಣನು ಪರ್ಣಶಾಲೆಗೆ ಬಂದನು. ಮಗಳು ಮಾಲಾಲಂಕೃತಳಾಗಿ ಕನ್ನಡಿಯ ಎದುರಿಗೆ ನಿಂತಿರುವದನ್ನು ಕಂಡು ಕುಪಿತನಾದನು. ದೇವರಿಗೆ ಸಂಕಲ್ಪಿಸಿದ ಮಾಲಿಕೆಗಳು ಅಪವಿತ್ರವಾದವೆಂದು ಅತೃಪ್ತನಾದನು. ಮತ್ತೆ ಪ್ರತ್ಯೇಕ ಮಾಲೆಗಳನ್ನು ರಚಿಸಿ, ಇನ್ನುಮೇಲೆ ಹೀಗೆ ಮಾಡಬಾರದೆಂದು ಮಗಳಿಗೆ ಹೇಳಿ ದೇವಾಲಯಕ್ಕೆ ಹೋದನು ವಿಷ್ಣುಚಿತ್ತನು ಕೊಟ್ಟ ಮಾಲಿಕೆಗಳೊಂದೂ ರಂಗನಾಥನ ಮೂರ್ತಿಯಮೇಲೆ ನಿಲ್ಲ

ಲಿಲ್ಲ. ಹೇಗೆ ಸಮರ್ಪಿಸಿದರೂ ಮಾಲೆಗಳು ಕೆಳಗುರುಳಿದವು. ಮಗಳ ನಿಮಿತ್ತವಾಗಿ ಇವತ್ತಿನ ಪುಷ್ಪಸೇವೆಯು ಭಗವದರ್ಪಿತವಾಗಲಿಲ್ಲ ವೆಂದು ಬ್ರಾಹ್ಮಣನು ಉಪವಾಸಮಾಡಿದನು. ದೇವರನ್ನು ವಿವಿಧ ವಾಗಿ ಕ್ಷಮೆಬೇಡಿದನು. ಆ ರಾತ್ರಿ ತಾನು ಪುಷ್ಪಮಾಲಿಕೆಗಳನ್ನು ಕಟ್ಟುತ್ತಿದ್ದಂತೆ ವಿಷ್ಣುಚಿತ್ತನಿಗೆ ಸ್ವಪ್ನವಾಯಿತು. ಶ್ರೀಹರಿಯು ವರವೇಷಧಾರಿಯಾಗಿ - 'ಎಲವೊ ಬ್ರಾಹ್ಮಣ! ನಾನು ನಿನ್ನ ಉಪಾಸ್ಯ ದೇವತೆಯು. ಕನ್ಯಾರ್ಥಿಯಾಗಿ ನಿನ್ನ ಬಳಿಗೆ ಬಂದಿರುವೆನು. ನಾಳಿ ನಿಂದ ಗೋದಾದೇವಿಯು ಮುಡಿದ ಹೂವನ್ನು ನನಗೆ ಸಮರ್ಪಿಸ ಬೇಕು. ಅವಳಿಗೆ ಸಮರ್ಪಿತವಿಲ್ಲದ ಮಾಲಿಕೆಯನ್ನು ನಾನು ಸ್ವೀಕರಿಸುವದಿಲ್ಲ' ಎಂದು ಹೇಳಿ ಮಾಯವಾದನು. ಪ್ರಬುದ್ಧನಾದ ಬ್ರಾಹ್ಮಣನು ದೇವದೇವಿಯರ ಕ್ಷಮೆಬೇಡಿದನು. ಸ್ವಪ್ನದಲ್ಲಿ ಭಗವ ದಾಜ್ಞೆಯಾದಂತೆ ಗೋದಾದೇವಿಯನ್ನು ರಂಗನಾಥನಿಗೆ ಕೊಟ್ಟು ವಿವಾಹಮಾಡಿದನು. ಅಂದಿನಿಂದ ದೇವಿಯು ರಂಗಮಂಟಪದಲ್ಲಿ ವಾಸಮಾಡಿದಳು. ಗೋದೆಯು ಶೈಶವದಲ್ಲಿ ಒಬ್ಬ ವೈಶ್ಯ ಗೆಳತಿಯು ಅವಳೊಡನೆ ಸರ್ವದಾ ಆಡಿಕೊಂಡಿದ್ದಳು. ಆ ಗೆಳತಿಯ ತಂದೆ ತಾಯಿಗಳು ಏಕಮಾತ್ರ ಪುತ್ರಿಯನ್ನು ಬಲು ಪ್ರೀತಿಯಿಂದ ಸಾಕು ತ್ತಿದ್ದರು. ಆ ಬಾಲೆಯು ಯುವತಿಯಾಗಿ ಗರ್ಭಿಣಿಯಾದವಳು ಮೃತಳಾದಳು. ಮಗಳ ಮರಣದಿಂದ ತಾಯಿತಂದೆಗಳು ಬಲು ದುಃಖಿತರಾದರು. ತಮ್ಮ ಮಗಳು ಸರ್ವದಾ ಗೋದೆಯೊಡನೆ ಆಡಿ ಕೊಂಡಿದ್ದುದರಿಂದಲೂ, ಅವಳು ಗೋದೆಯಂತೆ ಸುಂದರಿಯಾಗಿದ್ದು ದರಿಂದಲೂ, ತಂದೆತಾಯಿಗಳು ಗೋದೆಯನ್ನೇ ತಮ್ಮ ಮಗಳಂತೆ ಭಾವಿಸಿ ಸರ್ವದಾ ಅವಳೊಡನೆ ರಂಗಮಂಟಪದಲ್ಲಿ ವಾಸಮಾಡಿದರು. ದಂಪತಿಗಳು ಗೋದಾದೇವಿಯಿಂದ ಪರಮಾತ್ಮನ ಮಹಿಮೆಗಳನ್ನು ಕೇಳಿ ಮಹಾಭಕ್ತರಾದರು. ವೃದ್ಧದಂಪತಿಗಳ ಭಕ್ತಿಭಾವಕ್ಕೂ ಕಾರುಣ್ಯಕ್ಕೂ ಮೆಚ್ಚಿ, ದೇವಿಯು - 'ಮುಂದಿನ ಜನ್ಮದಲ್ಲಿ ನಿಮಗೆ

ನಾನೇ ಮಗಳಾಗಿ ಅವತರಿಸುವೆನು ; ಆಗ ನೀವು ನನ್ನನ್ನು ಶ್ರೀಹರಿಗೆ ಕೊಟ್ಟು ಲಗ್ನಮಾಡಿರಿ ; ಆ ಪುಣ್ಯಪ್ರಭಾವದಿಂದ ನಿಮಗೆ ಮೋಕ್ಷ ಪ್ರಾಪ್ತಿಯಾಗುವದು' ಎಂದು ವರವಿತ್ತಳು. ಆ ದಂಪತಿಗಳೇ ಈಗ ವಾಸವ ಕಾವೇರಿಯರಾಗಿ ಮಹಾದ್ರಿಯಲ್ಲವತರಿಸಿರುವರು. ಲಕ್ಷ್ಮೀ ಸ್ವರೂಪಳಾದ ಗೋದಾದೇವಿಯು ತಾನು ಕೊಟ್ಟ ವರವನ್ನು ಪಾಲಿಸ ಬೇಕೆಂದು ಕನ್ಯಕಾ ಪರಮೇಶ್ವರಿಯಾಗಿ ಅವತರಿಸಿರುವಳು. ಕನ್ನಿಕೆಯು ಸದಾಚಾರಳು. ಸದಾ ಕನ್ಯಾವಸ್ಥೆಯಲ್ಲಿರುವವಳು. ವೈಶ್ಯರಿಗೆ ಶ್ರೀಭೂದೇವಿಯರು ಕುಲದೇವತೆಯರು. ಕೃಷಿಕರ್ಮದಲ್ಲಿ ಭೂದೇವಿಯೂ ವಾಣಿಜ್ಯದಲ್ಲಿ ಶ್ರೀದೇವಿಯೂ ಜಯಪ್ರದೆಯರಾಗಿ ವೈಶ್ಯರಲ್ಲಿ ಅಭಿವೃದ್ಧಿಯನ್ನೈದುವರು. ಇಂಥಾ ಶ್ರೀಭೂಸ್ವರೂಪಗಳೆರಡರಿಂದಲೂ ಮಿಳಿತಳಾಗಿ ಅವತರಿಸಿರುವಳು ಕನ್ನಿಕೆಯು. ಇಂಥವಳನ್ನು ರಾಜನು ಹೇಗೆ ಹೊಂದುವನು ? ವಿನಾಶ ಕಾಲವಾಗಿರುವದರಿಂದ ರಾಜನಿಗೆ ವಿಪರೀತ ಬುದ್ಧಿಯುಂಟಾಗಿದೆ. ರಾಜನು ವಾಸವಿಯನ್ನಪಹರಿಸಲು ಯುದ್ಧಕ್ಕೆ ಬಂದರೆ, ವೈಶ್ಯರೂ ಧೈರ್ಯದಿಂದ ಯುದ್ಧಮಾಡಬೇಕು. ಕುಲಧರ್ಮವೇ ನಾಶವಾಗುವ ಕಾಲದಲ್ಲಿ ಪ್ರಜಾಲಯವಾದೀತೆಂದು ದುಃಖಿಸುವದು ಯೋಗ್ಯವಲ್ಲ. ಗುರುದೇವತಾನಿಂದಕರನ್ನು ಯಾರಾಗಲಿ ಯಥಾಶಕ್ತಿ ದಂಡನೆಮಾಡಬೇಕು. ಸ್ವಸ್ವಾಮಿ ನಿಂದೆಯನ್ನೂ ಸ್ವಗುರು ನಿಂದೆಯನ್ನೂ ಕೇಳಿಯಾವನು ಉಪೇಕ್ಷಿಸುವನೋ ಅವನು ನರಕಭಾಜನನಾಗುವನು. ವಾಸವಿಯು ವೈಶ್ಯಕುಲದೇವತೆಯು. ಸ್ವಜಾತಿ ದೇವತಾ ನಾಶವಾದ ಮೇಲೆ ಜೀವಿತದಿಂದ ಫಲವೇನು ? ವಾಸವೀ ಜನಾರ್ದನರಿಗಾಗಿ ಮಾಡುವ ದೇಹತ್ಯಾಗವು ಮೋಕ್ಷಸಾಧಕವು. ಶ್ರೀಭೂಸ್ವರೂಪಿಣಿಯಾದ ಕನ್ನಿಕೆಯು ಪರಾಕ್ರಾಂತಳಾದರೆ ಕೃಷಿವಾಣಿಜ್ಯ ಗೋರಕ್ಷಣ ವೃತ್ತಿಗಳೆಲ್ಲಿ ಬಂದಾವು ? ದೈವನಾಶ ವೃತ್ತಿನಾಶಮಾಡಿಕೊಂಡು

ಯಾವನು ತಾನೆ ಜೀವಿಸುವನು? ಸರ್ವ ನಾಶಮಾಡಿಕೊಂಡವನಿಗೆ ಪ್ರಪಂಚದಲ್ಲಿ ಪ್ರತಿಷ್ಠೆಯಿಲ್ಲ; ಗೌರವವಿಲ್ಲ.

ಗುರುಗಳ ಸಂದೇಶವು ಶಿಷ್ಯರ ಮನಸ್ಸಿನಲ್ಲಿ ನಾಟಿತು. ಗುರ್ವಾಜ್ಞೆಯಂತೆ ಪ್ರಾಣತ್ಯಾಗಕ್ಕೂ ಸಿದ್ಧರಾಗುವೆವೆಂದು ಗೋತ್ರ ಪಾಲಕರು ಜಯಘೋಷ ಮಾಡಿದರು.

ಕನ್ನಿಕೆಯು ಎಲ್ಲವನ್ನೂ ಕೇಳಿ ಗುರುಗಳಿಗೆ ನಮಸ್ಕರಿಸಿದಳು. 'ಗುರುಗಳೆ, ನನಗೆ ರಾಜನ ಭಯವಿಲ್ಲ. ಅದರಿಂದ ಒಂಟಾಗುವ ದುಃಖ ಮೊದಲೇ ನನಗಿಲ್ಲ. ಶ್ರೀಹರಿಯನ್ನು ಸರ್ವಪ್ರಕಾರದಿಂದಲೂ ಪಡೆದಿರುವೆನು. ಈಗಲೂ ಪಡೆಯುವೆನು. ಕೇಳುವ ಪ್ರಶ್ನೆಯೊಂದುಂಟು. ತಾವು ಧರ್ಮಾಚಾರ ವಿಚಾರಜ್ಞರು. ಆಚಾರಶಿಕ್ಷಕರು. ಸ್ವಯಮಾಚಾರ್ಯ ಪುರುಷರು. ಶ್ರೀವತ್ಸಕುಲ ಸಂಭೂತರು. ಸದುತ್ತರ ಕೊಡಬೇಕು' ಎಂದಳು.

ಈ ಮಾತನ್ನು ಕೇಳಿ ಮುಂದೆ ಮತ್ತೇನು ನುಡಿಯುವಳೋ ಎಂದು ಜನರು ಸ್ತಬ್ಧರಾಗಿ ಕುಳಿತರು.

ವಾಸವಿ—ಶಾಸ್ತ್ರದಲ್ಲಿ ನಾಯಿ ಮುಟ್ಟಿದ ಗಡಿಗೆಗೆ ಏನು ಶುದ್ಧಿ ಹೇಳಿದೆ?

ಆಚಾರ್ಯ—ಅದು ಅಗ್ನಿಯಿಂದ ಶುದ್ಧವಾಗುವದು.

ವಾಸವಿ—ಸದುತ್ತರ ಬಂತು (ಎಂದು ನಕ್ಕಳು.)

ಆಚಾರ್ಯ—ದೇವಿಯು ಸರ್ವಜ್ಞಳು (ಎಂದು ಅವರೂ ನಕ್ಕರು).

ಆಚಾರ್ಯರು ದೇವಿಯ ಮುಖವನ್ನು ನೋಡುತ್ತಾ, ಕಣ್ಣಿನಿಂದ ಆನಂದಬಾಷ್ಪವನ್ನು ಸುರಿಸುತ್ತಾ, ಕ್ಷಣಕಾಲ ಸ್ತಂಭೀಭೂತರಾಗಿ

ಕುಳಿತರು. ಅನಂತರ ಮುಖ್ಯಶಿಷ್ಯರನ್ನು ನೋಡಿ ಸಮುಖಕ್ಕೆ ಕರೆದರು.-'ಇನ್ನೇನು ಮಾಘಮಾಸವು ಸಮೀಪವಾಯಿತು. ಜನಾರ್ದನನ ಕಲ್ಯಾಣೋತ್ಸವಕ್ಕೆ ತಕ್ಕ ಪ್ರಯತ್ನಮಾಡಬೇಕು. ಸಕಲ ಸಂಭಾರಗಳನ್ನೂ ಶೇಖರಿಸಬೇಕು. ನಗರಾಲಂಕಾರವಾಗಬೇಕು. ಎಲ್ಲರ ಸರ್ವಸ್ವವೂ ಶ್ರೀಹರಿಗೆ ವರದಕ್ಷಿಣೆಯಾಗಬೇಕು. ಈ ಸಮಯದಲ್ಲಿ ಯಾರೂ ಧನಲೋಭ ಮಾಡಬಾರದು. ಶ್ರೀಹರಿಯು ನಿಮ್ಮ ಜಾಮಾತನಾದನು. ಕನ್ಯಕಾಕಲ್ಯಾಣಕ್ಕೆ ನೀವೆಲ್ಲರೂ ಯಜಮಾನರು. ನೀವು ಪುಣ್ಯವಂತರಾದಿರಿ ನಿಮ್ಮ ಕುಲಪಾವನವಾಯಿತು.' ಹೀಗೆನ್ನುತ್ತಲೇ ಪರವಶರಾಗಿ ಆನಂದಬಾಷ್ಪಗಳನ್ನು ದುರಿಸುತ್ತಾ ಎರಡು ಕೈಗಳನ್ನೂ ಮೇಲಕ್ಕೆತ್ತಿದರು.

> ಯಾರು ಕನ್ಯಕಾ ನಿಮಿತ್ತವಾಗಿ ಪ್ರಾಣತ್ಯಾಗ ಮಾಡಲು ಸಿದ್ಧರಾಗುವರೋ, ಯಾರು ಶ್ರೀಹರಿ ಕಲ್ಯಾಣ ಮಹೋತ್ಸವದಲ್ಲಿ ಯುದ್ಧಮಾಡಲು ಭಯ ಪಡುವದಿಲ್ಲವೋ ಅಂಥವರ ಕುಲವು ಅಭಿವೃದ್ಧಿಯನ್ನೈದಲಿ!

ಎಂದು ವರಪ್ರದಾನ ಮಾಡಿದರು.

ಮೊದಲೇ ಸಂದಿಗ್ಧ ಮನಸ್ಕರಾಗಿ ಪ್ರತಿಮಾತಾಡಲು ಭಯದಿಂದಿದ್ದ ಬಹುಜನರು ಆಚಾರ್ಯರ ಮಾತನ್ನು ಕೇಳಿ ಕ್ಷುಬ್ಧರಾದರು.-'ಇದೇನು ಮಾತು? ಶ್ರೀಹರಿಯೆತ್ತ; ಮಾನವ ಕನ್ನಿಕೆಯೆತ್ತ? ದೇವ ಮನುಷ್ಯರ ವಿವಾಹವೆಂದರೇನು? ಪಾಷಾಣಮೂರ್ತಿಯನ್ನು ಲಗ್ನಮಾಡಿಕೊಂಡು ಕನ್ನಿಕೆಯೇನು ಮಾಡುವಳು? ಇವಳಿಗಾಗಿ ಎಲ್ಲರೂ ಏಕೆ ಪ್ರಾಣಬಿಡಬೇಕು? ಈ ಬ್ರಾಹ್ಮಣನು ಕೇವಲ ಛಾಂದಸನು. ಹಣ್ಣುಹಣ್ಣು ಮುದುಕನು. ಮೊದಲಿಂದಲೂ ಹುಚ್ಚು

ಹುಚ್ಚಾಗಿ ಮಾತಾಡುತ್ತಿದ್ದಾನೆ. ಇವನಿಗೆ ಸುಮಗುಪ್ತನೊಬ್ಬ ಜರಠನು ಶಿಷ್ಯನಾಗಿದ್ದಾನೆ. ಈ ಮರುಳನ ಮಾತಿಗೆ ಕೊನೆಮೊದಲಿಲ್ಲ. ಸುಮಗುಪ್ತನು ರಾಜನಿಗೆ ಮಗಳನ್ನು ಕೊಟ್ಟರೆಷ್ಟು; ಬಿಟ್ಟರೆಷ್ಟು! ನಾವೇಕೆ ಇಲ್ಲಿದ್ದು ಪ್ರಾಣಬಿಡಬೇಕು? ವಿಷ್ಣುವರ್ಧನನು ಬರುವದೇ ತಡ! ಎಲ್ಲರನ್ನೂ ಸಂಹರಿಸುವನು. ಅವನು ಹಣ ಕೊಟ್ಟರೆ ಒಪ್ಪುವನಲ್ಲ. ಇತರ ಎಷ್ಟೇ ಸುಂದರಿಯರನ್ನು ಕೊಟ್ಟರೂ ಒಪ್ಪುವನಲ್ಲ. ಅವನು ಬರುವದು ಕನ್ನಿಕೆಗಾಗಿ. ಅವನು ಬರುವದಕ್ಕೆ ಮೊದಲೇ ನಾವೆಲ್ಲಾದರೂ ಹೋಗಿ ಪ್ರಾಣರಕ್ಷಣೆಮಾಡಿಕೊಳ್ಳೋಣ! ಈ ಮೂರ್ಖನ ಬೋಧನೆಗಳು ನಮಗೆ ಬೇಡ' ಎಂದು ಜರಿದರು.



## ಧರ್ಮದ್ರೋಹಿಗಳಿಗೆ ಗುರುಶಾಪ.

'ಯಾರು ಕುಲಮರ್ಯಾದೆಯನ್ನು ಮೀರಿ ಪ್ರಾಣಭೀತಿಯಿಂದ ಹೊರಟುಹೋಗುವರೋ ಅಂಥವರು ಪಾಪಿಗಳಾಗಲಿ ದುರಾಚಾರರಾಗಲಿ. ವೇದವೂ ವೈದಿಕ ಸಂಧ್ಯೋಪಾಸನೆಯೂ ಅವರನ್ನು ಬಿಟ್ಟುಹೋಗಲಿ. ಅಂಥವರು ರೂಪದಾಕ್ಷಿಣ್ಯರಹಿತರಾಗಲಿ. ದೈವಭಕ್ತಿ ಶೂನ್ಯರಾಗಲಿ. ಕಠಿಣಮನಸ್ಕರೂ ದರಿದ್ರರೂ ದಯಾರಹಿತರೂ ಆಗಲಿ. ಕುರೂಪಿಗಳೂ ದುರ್ವ್ಯಸನಿಗಳೂ ದುರಾಹಾರಿಗಳೂ ಜಾತಿಸಂಸ್ಕಾರಹೀನರೂ ಆಗಲಿ. ವಿಶ್ವಾಸಘಾತುಕರೂ ಶ್ರಾದ್ಧಕರ್ಮಬಾಹಿರರೂ ಆಗಲಿ.'

ಶ್ರೀಭಾಸ್ಕರಾಚಾರ್ಯರ ಈ ವಾಕ್ಯವನ್ನು ಕೇಳಿ ಕನ್ಯಕಾಪರಮೇಶ್ವರಿಯು - 'ತಥಾಸ್ತು! ತಥಾಸ್ತು! ತಥಾಸ್ತು! ಸತ್ಯಮೇವಾಸ್ತು!'

ಎಂದು ಸಮರ್ಥನಮಾಡಿದಳು. - 'ಬ್ರಾಹ್ಮಣ ವಾಕ್ಯವು ಅಮೋಘವು. ವಿಷ್ಣುಭಕ್ತನ ವಾಕ್ಯವು ಅಮೋಘತರವು. ಸದ್ಗುರುವಿನ ವಾಕ್ಯವು ಅಮೋಘತಮವು. ಗುರುಶಾಪದಲ್ಲಿ ಈ ಮೂರು ಶಕ್ತಿಗಳೂ ಇರುವವು. ಅವರ ಬಾಯಿಂದ ಬಂದ ಮಾತುಗಳು ಅಕ್ಷರಶಃ ಸತ್ಯವಾಗುವವು ಕಮಲಾಪತಿಯಾದ ನಾರಾಯಣನಿರುವದು ಸತ್ಯವಾದರೆ - ಸರ್ವಶಕ್ತಳಾದ ಲಕ್ಷ್ಮೀದೇವಿಯಿರುವದು ಸತ್ಯವಾದರೆ - ವೇದಶಾಸ್ತ್ರಗಳೂ ಸಕಲ ಸದ್ಧರ್ಮಗಳೂ ಬ್ರಾಹ್ಮಣ್ಯವೂ ಸತ್ಯವಾದರೆ - ಶ್ರೀವತ್ಸವಂಶೋದ್ಭವರಾದ ಆಚಾರ್ಯರಾಡಿದುದು ಸತ್ಯವಾಗಲಿ!' ಎಂದು ದೇವಿಯು ಘೋಷಣಮಾಡಿದಳು.

ಆ ಸಮಯದಲ್ಲಿ ಕನ್ನಿಕೆಯು ಮಾನವಿಯಂತೆ ಕಾಣಿಸಲಿಲ್ಲ. ಆಕೆಯ ಮುಖವನ್ನು ನೋಡಲು ಯಾರೂ ಸಮರ್ಥರಾಗಲಿಲ್ಲ. ಮನುಷ್ಯಾಕಾರವನ್ನು ತಾಳಿದ ವಿದ್ಯುನ್ಮೂರ್ತಿಯಾಗಿದ್ದಳು.

ಶಾಪಗ್ರಸ್ತರಾದ ವೈಶ್ಯರು ನಿಮಿಷಮಾತ್ರದಲ್ಲಿ ಚಂಡಾಲರಂತೆ ನೀಲವರ್ಣರಾಗಿ ಪಾಪಾಚಾರರೆನಿಸಿದರು. ತಮ್ಮಲ್ಲಿ ತಾವೇ— 'ಈ ಕನ್ನಿಕೆಯು ವೈಶ್ಯಕುಲದಲ್ಲಿ ಬಡಬಾನಲನಂತೆ ಜನಿಸಿದಳು. ಇವಳನ್ನು ನೋಡಿದರೆ ಪಾಪ. ಇವರೊಡನೆ ಮಾತಾಡುವದು ಮಹಾಪಾಪ. ಕನ್ನಿಕೆಯನ್ನು ರಾಜನಿಗೆ ಕೊಟ್ಟರೆ ಕುಲಕ್ಕಾದ ನಷ್ಟವೇನು? ಕುಲಮರ್ಯಾದೆಯೆಂದು ಕುಲಕುಲವನ್ನೇ ನಾಶಮಾಡುವದು ಯಾವ ನ್ಯಾಯ? ಇನ್ನೇನು, ರಾಜಸೈನ್ಯವು ಬರುವದು. ಈ ಮೂಢರು ಹತರಾಗುವರು. ರಹಸ್ಯಮಾರ್ಗದಿಂದ ನಾವೆಲ್ಲರೂ ಯಾವ ದೇಶಕ್ಕಾದರೂ ಹೋಗೋಣ! ನಮ್ಮ ಮಕ್ಕಳುಮರಿಗಳು ಎಲ್ಲಾದರೂ ಸುಖವಾಗಿರಲಿ' ಎಂದುಕೊಂಡು ಪ್ರಯಾಣಸನ್ನದ್ಧರಾದರು.

ಇನ್ನೂರು ಗೋತ್ರದವರು ತಮ್ಮ ಧನಕನಕಗಳನ್ನು ಸಾಗಿಸಿ ಕೊಂಡು ಸಮೀಪದಲ್ಲಿದ್ದ ಪರರಾಜ್ಯದಲ್ಲಿ ನೆಲೆಸಿದರು. ಎಂಭತ್ತು ಗೋತ್ರಗಳವರು ಯವನರಾಜ್ಯವನ್ನು ಕುರಿತು ಪ್ರಯಾಣಮಾಡಿ ದರು. ಮತ್ತೆ ಇನ್ನೂರು ಗೋತ್ರದವರು ದಕ್ಷಿಣದೇಶಕ್ಕೆ ಹೋದರು. ನೂರ ಮೂವತ್ತೆರಡು ಗೋತ್ರಗಳವರು ಉತ್ತರ ದೇಶವನ್ನು ಸೇರಿ ದರು. ಹೀಗೆ ಒಬ್ಬರನ್ನು ನೋಡಿ ಮತ್ತೊಬ್ಬರು ಗುಂಪುಗುಂಪಾಗಿ ಹೊರಡುವ ಸಂಖ್ಯೆ ಹೆಚ್ಚಾಯಿತು ಪಟ್ಟಣವು ಬರಿದಾಯಿತು.

ಜಿತಮನಸ್ಕರಾದ ನೂರೆಂಡು ಗೋತ್ರಪಾಲಕರು ಭಾಸ್ಕರಾ ಚಾರ್ಯರಿಗೆ ನಮಸ್ಕರಿಸಿದರು.-'ಇನ್ನು ನಮಗೆ ನಿಯತಕಾರ್ಯಗಳನ್ನು ನೇಮಿಸಿರಿ; ಮಾಧವೋದ್ವಾಹ ಕಾರ್ಯದಲ್ಲಿ ನಮ್ಮ ಪ್ರಾಣಗಳ ನ್ನೊಪ್ಪಿಸಲು ಸಿದ್ಧರಾಗಿರುವೆವು' ಎಂದು ವಿಜ್ಞಾಪಿಸಿದರು.

ಆಚಾರ್ಯರು,—'ಇದು ವಿಷ್ಣುಪೂಜಾಖ್ಯ ಕರ್ಮವು. ಈ ಮಹಾಯಾಗದಲ್ಲಿ ಶ್ರೀಜನಾರ್ದನನು ವೀತಿಹೋತ್ರನು. ಕನ್ನಿಕೆಯು ವಪೆಯು. ಸರ್ವರೂ ಯಜಮಾನರು. ಸರ್ವರೂ ಋತ್ವಿಜರು. ಸರ್ವರೂ ಅಧ್ವರ್ಯುಗಳು. ಗೋತ್ರಪಾಲಕರೆ! ಇದೋ ತಾಂಬೂಲ. ಇದೇ ಮಧುಪರ್ಕ. ಇದೋ ಕಂಕಣ. ಇದನ್ನು ನಿಮ್ಮ ಕೈಯಲ್ಲಿ ಬಂಧಿಸಿರಿ. ತೀರ್ಥಪ್ರಸಾದಗಳನ್ನು ತೆಗೆದುಕೊಳ್ಳಿರಿ' ಎಂದು ಎಲ್ಲ ರಿಗೂ ದೀಕ್ಷೆಯನ್ನು ಕೊಟ್ಟರು.

ಸುಮಗುಪ್ತನು ತನ್ನ ನಿಮಿತ್ತವಾಗಿ ಪ್ರಾಣಹಾನಿಯಾಗುವ ದೆಂದು ದುಃಖಿಸಿ,-'ಗುರುಗಳೇ! ಈ ಘೋರ ಕುಲಕ್ಷಯವನ್ನು ನಾನು ನೋಡಲಾರೆನು. ನಾನೇ ಮೊದಲು ಅಗ್ನಿಪ್ರವೇಶ ಮಾಡುವೆನು. ಕನ್ನಿಕೆಯನ್ನು ಶ್ರೀಜನಾರ್ದನನಿಗೆ ವಿವಾಹಮಾಡಿಕೊಟ್ಟು ಕುಲ ವನ್ನು ರಕ್ಷಿಸುವ ಉಪಾಯವನ್ನು ತಾವು ಹುಡುಕಿರಿ. ನಾನು ಕುಲ ಘಾತಕ ಪಾತಕಿಯಾಗಲಾರೆನು' ಎಂದು ಬೇಡಿಕೊಂಡನು.

ಆಚಾರ್ಯರು—'ಅಯ್ಯಾ, ನಿನಗಿನ್ನೂ ಮೋಹ ಬಿಡಲಿಲ್ಲ. ನಿನಗಾಗಿ ಈ ಸಂಭ್ರಮ ನಡೆಯುತ್ತಿಲ್ಲ. ದೇವತೆಗಳು ಧರ್ಮರಕ್ಷಣೆಗಾಗಿಯೂ ಕುಲಸಂರಕ್ಷಣೆಗಾಗಿಯೂ ಈ ಕಾರ್ಯವನ್ನು ನಡೆಸುತ್ತಿರುವರು. ದೇವದೇವನಾದ ಶ್ರೀಮನ್ನಾರಾಯಣನ ಪೂಜೆಯಿದು. ಲಕ್ಷ್ಮೀಕಲ್ಯಾಣ ಕಾರ್ಯದಲ್ಲಿ ವಿಘ್ನದ ಮಾತಾಡಬೇಡ. ಹೀಗೆ ಮಾತಾಡುವದು ಮಹಾಪರಾಧವಾಗುತ್ತದೆ'ಯೆಂದು ಹೇಳಿದರು.

ಕನ್ನಿಕೆಯು, -'ಗುರುಗಳೆ, ರಾಜನು ಚಪಲನು. ಹೇಯಾಹೇಯ ಜ್ಞಾನಶೂನ್ಯನು. ಗಮ್ಯಾಗಮ್ಯ ವಿಚಾರರಹಿತನು. ಕಾಮೈಕರತಚಿತ್ತನು. ದುರ್ಜ್ಞಾನಿಯು. ಕಾರ್ಯಾಕಾರ್ಯ ವಿವೇಕಬಾಹಿರನು. ಇಂತಹ ದುಷ್ಟನು ನನ್ನನ್ನು ಬಲಾತ್ಕಾರವಾಗಿ ಲಗ್ನಮಾಡಿಕೊಳ್ಳಬೇಕೆಂಬ ದುಷ್ಟಸಂಕಲ್ಪವುಳ್ಳವನಾಗಿರುವನು. ಇಂಥವನ ಮನಸ್ಸಿನಲ್ಲಿ ನಿರಂತರ ನನ್ನ ಆಕಾರಚಿಂತನೆಯು ನಿಂತಕಾರಣ ನನ್ನ ರೂಪವು ಕಲುಷಿತವಾಯಿತು. ಅವನ ಪಾಪದೃಷ್ಟಿಯಿಂದ ನನ್ನ ಶರೀರವು ಶುನಕನು ಮುಟ್ಟಿದ ಭಾಂಡದಂತಾಯಿತು. ಶುನಸ್ಪೃಷ್ಟವಾದ ಭಾಂಡವು ಅಗ್ನಿಯಿಂದ ಶುದ್ಧವಾಗಬೇಕು. ನನ್ನ ಶರೀರವನ್ನು ಹುತವಹನಿಗರ್ಪಿಸಿ ಶುದ್ಧಳಾಗುವೆನು. ಅಶುದ್ಧ ಶರೀರವು ಶುದ್ಧನಾದ ಪರಮಾತ್ಮನಿಂದ ಸ್ವೀಕೃತವಾಗಲಾರದು. ಪೂರ್ವದಲ್ಲಿ ರಾವಣನ ಸೆರೆಯಲ್ಲಿದ್ದಕಾರಣ ಸೀತೆಯು ಅಗ್ನಿಪ್ರವೇಶಮಾಡಿದಳು. ಶುದ್ಧ ಸ್ವರೂಪದಿಂದ ಶ್ರೀರಾಮಚಂದ್ರನನ್ನಾಲಂಗಿಸಿದಳು. ತಾವು ಶ್ರೋತ್ರಿಯರು. ತಮ್ಮ ಅಗ್ನಿಹೋತ್ರದಿಂದ ದಿವ್ಯಾಗ್ನಿಯನ್ನು ಕರುಣಿಸಬೇಕು. ಅಗ್ನಿಯನ್ನು ದೇವದೇವನಾದ ಶ್ರೀಜನಾರ್ದನನ ಎದುರಿಗೆ ಪ್ರತಿಷ್ಠಿಸಬೇಕು. ವೈಷ್ಣವಾಗ್ನಿಯಲ್ಲಿ ಈ ದೇಹವು ಪಾವನವಾಗಬೇಕು' ಎಂದು ಉದ್ಘೋಷಿಸಿದಳು.

ದೇವಿಯ ಮಾತನ್ನು ಕೇಳಿ ಜನರು ಹಾಹಾಕಾರ ಮಾಡಿದರು. ಖಿನ್ನರಾಗಿ ಕಂಬನಿಗರೆಯುತ್ತಾ ಮಿತಿಮೀರಲು ಗಟ್ಟಿಯಾಗಿ ಗೋಳಾಡಿದರು.-'ದೇವಿ! ನೀನಿಷ್ಟು ಕಠಿಣ ನುಡಿಯಬೇಡಮ್ಮಾ; ನಿನ್ನ ಶರೀರವು ಶಿರೀಷ ಕುಸುಮದಂತೆ ಮೃದುಲವಾಗಿರುವದಮ್ಮಾ; ಮುಖವು ಕಲಂಕರಹಿತ ಚಂದ್ರಬಿಂಬದಂತಿರುವದಮ್ಮಾ; ಭುಜಗಳು ಸುಮಲತೆಗಳಾಗಿರುವವಮ್ಮಾ; ದೇಹವು ಬಂಗಾರದ ಬಳ್ಳಿಯಾಗಿರುವದಮ್ಮಾ; ಪಾದಗಳು ಕಮಲದಂತಿರುವವಮ್ಮಾ; ನೇತ್ರಗಳು ಮೀನಲೋಚನಗಳಾಗಿರುವವಮ್ಮಾ; ಸುಕುಮಾರಿಯಾದ ನೀನು ಅಗ್ನಿಪ್ರವೇಶ ಮಾಡಬೇಡವಮ್ಮಾ; ನಾವು ಈ ಪಾಪಿಕಣ್ಣುಗಳಿಂದ ನೋಡಲಾರೆವಮ್ಮಾ; ನಿನಗೆ ಬದಲಾಗಿ ನಾವೇ ಅಗ್ನಿಪ್ರವೇಶ ಮಾಡುವೆವಮ್ಮಾ' ಎಂದು ಮೊರೆಯಿಟ್ಟರು.

ಈ ಚಿತ್ರವನ್ನು ನೋಡಿ ಕುಸುಗುಪ್ತನು ಕುಠಾರದಿಂದ ಛಿನ್ನವಾದ ವೃಕ್ಷದಂತೆ ಕೆಳಗುರುಳಿದನು. ಮೂರ್ಛಿತನಾದ ತಂದೆಯನ್ನು ಕನ್ನಿಕೆಯು ಶೈತ್ಯೋಪಚಾರಮಾಡಿ ಎಬ್ಬಿಸಿದಳು. ತಂದೆಯನ್ನು ಕುರಿತು,—'ಮಹಾವಿಷ್ಣುಭಕ್ತನಾದ ನಿನಗೆ ಈ ಮೋಹವೇಕೆ? ಸುಕರ್ಮವೇತ್ತನಾದ ನಿನಗೆ ದುಃಖವೇಕೆ? ಸುಖದುಃಖ ಸಂಸ್ಪರ್ಶವು ಭಕ್ತಿವರ್ಧಕವಲ್ಲ. ನನ್ನನ್ನು ಮೊದಲೇ ಶ್ರೀಹರಿಗೆ ಮನಸ್ಸಿನಿಂದ ಸಮರ್ಪಿಸಿರುವೆಯಲ್ಲವೆ? ಶ್ರೀಹರಿಯು ಅಗ್ನಿಸ್ವರೂಪನು. ಅವನು ಸ್ವಯಂ ತೇಜೋನಿಧಿಯು. ಅವನ ಮುಖದಿಂದ ಅಗ್ನಿಯು ಜನಿಸಿದನು. ಅವನ ನೇತ್ರದಿಂದ ಸೂರ್ಯನುದಿಸಿದನು. ಅವನ ಸುದರ್ಶನವು ಜ್ವಾಲಾಸ್ವರೂಪವು. ಹೀಗಿರುವಲ್ಲಿ ಮಹಾವಿಷ್ಣುವಿಗಿಂತ ಅಗ್ನಿಯು ಅಧಿಕನೆ? ಸಮುದ್ರವಾಸಿಗಳು ಕೂಪಸ್ನಾನಕ್ಕೆ ಭಯಪಡುವರೆ? ಮಾಧವನನ್ನು ಮನುಷ್ಯದೇಹದಿಂದ ಹೊಂದುವದಕ್ಕಾಗುವದೆ? ರಾಜದೃಷ್ಟಿ ದೂಷಿತವಾದ ದೇಹವನ್ನು ತ್ಯಜಿಸುವೆನು. ಕ್ಲೇಶಪಡ

ಬೇಡ. ಉಗ್ರನಾಗಬೇಡ. ನಿನ್ನ ಅಳಿಯನಾದ ನಾರಾಯಣನು ತ್ವರೆಮಾಡುತ್ತಿರುವನು. ನಾರಾಯಣನಿಗೆ ಕನ್ಯಾದಾನ ಮಾಡುವ ನೀನು ಧನ್ಯನು. ನೀನು ಪರಿಶುದ್ಧನು. ಆತ್ಮೀಯರಾದ ಸತಿಸುತ ಗೃಹಾರಾಮಾದಿಗಳನ್ನೂ ತನ್ನನ್ನೂ ಶ್ರೀಹರಿಗೆ ಸಮರ್ಪಿಸಿ ಧನ್ಯತಮನಾದವನು ವಿಷ್ಣುಪದವನ್ನು ಹೊಂದುವನು. ಸರ್ವಸ್ವಾಮಿಯಾದ ವಿಷ್ಣುವು ಸಕಲ ಜಗತ್ತನ್ನೂ ತನ್ನ ಕುಕ್ಷಿಯಲ್ಲಿ ಧರಿಸಿರುವನು. ಮನುಷ್ಯರ ಮತ್ತು ದೇವತೆಗಳ ಶರೀರಗಳಂತೆ ಸ್ವಾಮಿಯ ಶರೀರವು ನಶ್ವರವಾದುದಲ್ಲ ಸಕಲ ಜೀವರೂ ಪ್ರಳಯಕಾಲದಲ್ಲಿ ಆ ದೇವನ ಉದರದಲ್ಲಿರುವರು. ಭಗವದುಪಾಸನೆಗೆ ವಿವಿಧ ಯೋಗಗಳಿದ್ದರೂ ಎಲ್ಲಕ್ಕೂ ಪ್ರಪತ್ತಿಯು ಅಧಿಕವೆನಿಸುವದು. ಎಲ್ಲವನ್ನೂ ದೇವರಿಗಾಗಿ ತ್ಯಾಗಮಾಡುವದು ಸನ್ಯಾಸವೆನಿಸುವದು. ಕರ್ಮದಿಂದಾಗಲಿ, ಸಂತತಿಯನ್ನು ಪಡೆಯುವದರಿಂದಾಗಲಿ, ದಾನಧರ್ಮಗಳಿಂದಾಗಲಿ, ಮೋಕ್ಷಪ್ರಾಪ್ತಿಯಾಗಲಾರದು. ಪೂರ್ವದಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ಅಷ್ಟಾದಶಾಧ್ಯಾಯಗಳುಳ್ಳ ಗೀತೆಯನ್ನುಪದೇಶಿಸಿದನು. ಸಕಲ ಶಾಸ್ತ್ರಗಳೂ ಗೀತೆಯಲ್ಲಿ ಗರ್ಭಿತವಾಗಿರುವವು. ಅಂತಿಮಾಧ್ಯಾಯದಲ್ಲಿ, ವೇದಾಂತ ವಿಜ್ಞಾನದಲ್ಲಿ ನಿಶ್ಚಿತಾರ್ಥವನ್ನು ತಿಳಿದವರೂ, ಸನ್ಯಾಸಯೋಗದಿಂದ ಅತಿಶುದ್ಧ ಸತ್ವರಾಗಿರುವವರೂ, ಮುಕ್ತರಾಗಿ ಬ್ರಹ್ಮಲೋಕದಲ್ಲಿ ವಾಸಮಾಡುವರೆಂದು ಸ್ಪಷ್ಟವಾಗಿರುವದು ಆದ್ದರಿಂದ ಎಲ್ಲಕ್ಕೂ ಮೊದಲು 'ಮಾರ್ಗದರ್ಶಕರಾದ ಸತ್ಕುಲ ಪ್ರಸೂತರಾದ ಗುರುಗಳನ್ನು ಸಂಪಾದಿಸಬೇಕು ನಮ್ಮ ಆಚಾರ್ಯರಾದರೋ ಸತ್ಕುಲ ಪ್ರಸೂತರು. ವೇದಶಾಸ್ತ್ರ ತತ್ವಾರ್ಥವೇತ್ತರು. ಷಟ್ಕರ್ಮನಿರತರು. ಸದಾಚಾರ ಪರಾಯಣರು. ಅವರೇ ಸರ್ವರ ಮಾರ್ಗದರ್ಶಿಗಳು. ಅಂಥವರನ್ನು ಗುರುತ್ವೇನ ವರಿಸಿ ಆಚಾರ್ಯವಂತರಾಗಿ ಅವರ ಆಜ್ಞೆಯಂತೆ ಮುಂದಿನ ಸಕಲ ಕಾರ್ಯ

ಗಳನ್ನೂ ನಡೆಸುವದು ಸರ್ವರಿಗೂ ಶ್ರೇಯಸ್ಕರವು. ಇದು ಸತ್ಯವು. ಇದು ಸುಸ್ಥಿರವು' ಎಂಬದಾಗಿ ದೇವಿಯು ನುಡಿದಳು.

ಸಕಲರೂ ಕನ್ನಿಕೆಯಾಡಿದುದು ಸತ್ಯವೆಂದು ಜಯಜಯ ಘೋಷಮಾಡಿದರು. ಶಾಸ್ತ್ರನಿಯಮಾನುಸಾರ ಯಾಗದೀಕ್ಷೆಯನ್ನು ಸ್ವೀಕರಿಸಲು ನೂರೆರಡು ಗೋತ್ರದವರು ಜನಾರ್ದನ ತೀರ್ಥದಲ್ಲಿ ಸಂಕಲ್ಪಪೂರ್ವಕ ಸ್ನಾನಮಾಡಿದರು. ದೇಹಶುಧ್ಯರ್ಥವಾಗಿ ಪಂಚ ಗವ್ಯವನ್ನು ಪ್ರಾಶನಮಾಡಿದರು. ಆಚಾರ್ಯರು 'ತದ್ವಿಷ್ಣೋಃ ಪರಮಂಪದಂ' ಮೊದಲಾದ ವೇದಮಂತ್ರಗಳಿಂದ ಶಿಷ್ಯರನ್ನು ಶ್ರೀ ಹರಿಯ ಪಾದದಲ್ಲಿ ಸಮರ್ಪಿಸಿ, ಆಬಾಲರಿಗೂ ಅಷ್ಟಾಕ್ಷರಿಯನ್ನುಪ ದೇಶಿಸಿದರು.

ಅನಂತರ ವೈಶ್ಯರು ಹರಿಕಲ್ಯಾಣ ಮಹೋತ್ಸವ ಗೌರವಕ್ಕೆ ತಕ್ಕಂತೆ ನಗರವನ್ನು ದಿವ್ಯತೋರಣಗಳಿಂದಲೂ ಮಂಟಪಗಳಿಂದಲೂ ಅಲಂಕರಿಸಿದರು. ವೈಶ್ಯರ ಒಂದೊಂದು ಮನೆಯೂ ಮದುವೆಯ ಮನೆಯಾಯಿತು. ಮನೆ ಮನೆಗಳ ಬಾಗಿಲಿನಲ್ಲಿ ಮಂಗಳವಾದ್ಯಗಳು ಮೊಳಗಿದವು. ನರನಾರಿಯರು ನೂತನ ವಸ್ತ್ರಾಭರಣಗಳಿಂದಲಂಕೃತ ರಾಗಿ ಉತ್ಸವವನ್ನಾರಂಭಿಸಿದರು.

ಇಲ್ಲಿಗೆ ಆರನೇ ಅಧ್ಯಾಯವು ಮುಗಿದುದು.



# ಏಳನೇ ಅಧ್ಯಾಯ



**ಮರಣವೇ** ಮಹೋತ್ಸವವೆಂದು ದೃಢಮಾಡಿನಿಂತ ನೂರೆರಡು ಗೋತ್ರಗಳವರು ಎದೆಗುಂದದೆ ವಿವಾಹಸಿದ್ಧತೆಯೆಂಬ ಹೆಸರಿನಿಂದ ಯುದ್ಧಸಿದ್ಧತೆಯನ್ನು ಮಾಡಿದರು. ವಿಷ್ಣುವರ್ಧನನು ಬಂದುಹೋದ ದಿನದಿಂದ ಸೈನ್ಯಸಂಗ್ರಹಣೋದ್ಯೋಗವು ಪ್ರತ್ಯೇಕ ವಾಗಿ ನಡೆದಿತ್ತು. ಹದಿನೆಂಟು ಪಟ್ಟಣಗಳ ಶೂದ್ರನಾಯಕರು ಕನ್ಯಾವಿವಾಹಸಂಭ್ರಮ ಕಂಟಕನಾಗಿ ಬರುವ ರಾಜನನ್ನು ಸದೆ ಬಡಿವೆವೆಂದು ನಗರರಕ್ಷಣ ದೀಕ್ಷಿತರಾಗಿದ್ದರು. ಈ ಜನರ ಭಕ್ತಿ ಭಾವಕ್ಕೆ ಮೆಚ್ಚಿ ವೈಶ್ಯಪ್ರವರರು ವಾಣಿಜ್ಯವೃತ್ತಿಯನ್ನು ಮಾತ್ರ ತಾವಿಟ್ಟುಕೊಂಡು ಕೃಷಿ ಗೋರಕ್ಷಣ ವೃತ್ತಿಗಳನ್ನು ಶೂದ್ರರಿಗೆ ದಾನ ಮಾಡಿದರು. ಅಸ್ಪೃಶ್ಯ ವರ್ಗದವರೂ (ಹರಿಜನರು) ವೈಶ್ಯರಿಗೆ ಬೆಂಬಲರಾದರು. ತತ್ಕಾಲದಲ್ಲಿ ಅಸ್ಪೃಶ್ಯರಿಗೆ ವಿಶೇಷ ಧನ ಕೊಟ್ಟದ್ದು ಮಾತ್ರವಲ್ಲ, ತಮ್ಮ ವಂಶಪರಂಪರೆಯಲ್ಲಿ ವಿವಾಹಾದಿ ಶುಭಕಾಲಗಳಲ್ಲಿ ಅಸ್ಪೃಶ್ಯರನ್ನು ಸನ್ಮಾನಿಸುವೆವೆಂದು ಆ ಜನರಿಗೆ ದೊಡ್ಡ ಗೌರವವನ್ನುಂಟುಮಾಡಿದರು.

ಅತ್ತ ರಾಜಮಹೇಂದ್ರದಲ್ಲಿ ವಿಷ್ಣುವರ್ಧನನು ನಿತ್ಯವೂ ಜೈತ್ರ ಯಾತ್ರೆ ಹೊರಡಬೇಕೆಂದು ಅವಸರಿಸುತ್ತಿದ್ದನು. ನೆರೆಜಾಣರಾದ ವೈಶ್ಯರಿಂದುಪಕೃತರಾಗಿದ್ದ ಅಧಿಕಾರಿವರ್ಗದವರೂ ಪುರೋಹಿತರೂ

ಯಾತ್ರಾಸಂಗಳೋತ್ಸವವನ್ನು ಆದಷ್ಟು ಸಾವಕಾಶಮಾಡಿದರು. ಕೃದ್ಧನಾದ ರಾಜನು ಕಾಮಾಂಧನಾಗಿ ದುರ್ದೈವದಿಂದ ಅಷ್ಟಮಿ ಮಂಗಳವಾರ ಆರ್ದ್ರಾನಕ್ಷತ್ರ ವೈಧೃತಿಗಳನ್ನೂ ಗಣನೆಗೆ ತಾರದೆ ಸೈನ್ಯವು ಇವತ್ತೇ ಹೊರಡಬೇಕೆಂದು ಕಠಿಣಶಾಸನಮಾಡಿದನು. ಜ್ಯೋತಿಷ್ಕರು ಆ ದಿನವು ಕೇವಲ ದುರ್ದೈವದ ದಿನವೆಂದು ಬೇಡಿಕೊಂಡರು. ಜೋಯಿಸರ ಮಾತು ರಾಜನ ಮನಸ್ಸಿಗೆ ಬರಲಿಲ್ಲ. ಪ್ರತಿಯಾಗಿ ಅಷ್ಟಮಿ ಆರ್ದ್ರಾನಕ್ಷತ್ರಗಳು ಕೇವಲ ಶಿವದೇವತಾಕವಾದವುಗಳು, ಶಿವಭಕ್ತರಿಗೆ ದಿನವಾರಗಳು ಅಡ್ಡಿಬರಲಾರವು' ಎಂದು ಜಬರಿಸಿದನು. ಯಾರಿಗೂ ರಾಜನೆದುರಿಗೆ ಮಾತನಾಡುವ ಧೈರ್ಯ ಬರಲಿಲ್ಲ. ಅರಮನೆಯ ಮುಂದೆ ಆನೆಗಳೂ ಕುದುರೆಗಳೂ ಒಂಟೆಗಳೂ ಹೇಸರಕತ್ತೆಗಳೂ ಸಾಲಾಗಿ ನಿಂತವು. ಚತುರಂಗ ಬಲವು ಸಜ್ಜಿತವಾಗಿ ಪ್ರಯಾಣೋನ್ಮುಖವಾಯಿತು ರಣಭೇರಿಗಳು ಮೊಳಗಿದವು. ವೀರರು ಕೆಂಪುಬಣ್ಣದ ಪೋಷಾಕುಗಳನ್ನು ಹಾಕಿಕೊಂಡು ಸುಗಂಧ ಲಿಪ್ತಾಂಗರಾಗಿ ಕರವೀರ ಪುಷ್ಪಮಾಲಿಕೆಗಳನ್ನು ಕಂಠದಲ್ಲಿ ಧರಿಸಿ, ಖಡ್ಗಪಾಣಿಗಳಾಗಿ ರಾಜನನ್ನು ವಂದಿಸಿದರು. ಪಟ್ಟದಾನೆ ಪಟ್ಟದ ಕುದುರೆಗಳು ನಾನಾಭೂಷಣಗಳಿಂದಲಂಕೃತಗಳಾಗಿ ರಾಜಯಾನಾರ್ಥವಾಗಿ ಮಹಾದ್ವಾರದಲ್ಲಿ ನಿಲ್ಲಿಸಲ್ಪಟ್ಟವು. ಆನೆ ಕುದುರೆಗಳ ಕಣ್ಣುಗಳಿಂದ ಅಶುಭಸೂಚಕವಾದ ಅಶ್ರುಧಾರೆಯನ್ನು ಕಂಡು ಜನರು ಭೀತರಾದರು. ರಾಜನು ಕನ್ನಿಕೆಯನ್ನು ಚಿಂತಿಸುತ್ತಾ ಸಿಂಹಾಸನದಿಂದೇಳುವ ಹೊತ್ತಿಗೆ ಸರಿಯಾಗಿ ಮೇಘಗರ್ಜನೆಯಾಯಿತು. ಅಲ್ಪವೃಷ್ಟಿಯಾಯಿತು. ಪುರೋಹಿತನು ನಿರೋಧಿಸುವದಕ್ಕೆ ಸಾಧ್ಯವಾಗದೆ ಒಂಟೆ ಸೀನು ಸೀತನು. ಅಶುಭ ಸೂಚನೆಗಳು ಒಂದರ ಹಿಂದೆ ಮತ್ತೊಂದಾಗುತ್ತಾ ಬಂದವು. ಒಂದರ ಕಡೆಗೂ ರಾಜನು ಗಮನಕೊಡಲಿಲ್ಲ.

ಶಕುನ ಶಾಸ್ತ್ರಕಾರರು ಪ್ರಯಾಣಕಾಲದಲ್ಲಿ ಇಂತಿಂಥವುಗಳನ್ನು ಕಂಡರೆ ಪ್ರಯಾಣಮಾಡಬಾರದೆಂದು ವಿಧಿಸಿರುತ್ತಾರೆ. ಅವು ಯಾವವೆಂದರೆ:—

ಪ್ರಯಾಣಕಾಲದಲ್ಲಿ ಆನೆಕುದುರೆಗಳ ಕಣ್ಣಿನಿಂದ ನೀರು ಬರಬಾರದು. ಒಂಟಿ ಸೀನು ಸೀನಬಾರದು. ಒಂಟಿ ಬ್ರಾಹ್ಮಣನು ಎದುರಿಗೆ ಬರಬಾರದು. ಗುಡುಗಬಾರದು ಅಲ್ಪವೃಷ್ಟಿಯಾಗಬಾರದು. ಎದುರಿಗೆ ಕುರುಡನು ಬರಬಾರದು. ಕಷಾಯಧಾರಿಯು ಬರಬಾರದು. ಶೂಲಪಾಣಿಯು ಬರಬಾರದು. ಆದ್ಯಂತ ಭಸ್ಮ ಲೇಪಿಸಿಕೊಂಡವನು ಬರಬಾರದು. ಖಟ್ವಾಂಗಧರನೂ ಪಾಷಂಡನೂ ಬರಬಾರದು. ತೈಲಪಾತ್ರಧಾರಿಯೂ ಭೂತನ ಪೂಜಾರಿಯೂ ಬರಬಾರದು. ಶೂದ್ರರು ಜಗಳವಾಡುತ್ತಾ ರೋದನಮಾಡುತ್ತಾ ಬರಬಾರದು. ತಲೆಯಮೇಲಿನ ಕಿರೀಟವಾಗಲಿ ಉಷ್ಣೀಷವಾಗಲಿ ಕೆಳಗೆ ಬೀಳಬಾರದು. ಅಷ್ಟಮಿ ಮಂಗಳವಾರ ವೈಧೃತಿ ಆರ್ದ್ರಾನಕ್ಷತ್ರ ಸಂಧ್ಯಾಕಾಲಗಳಲ್ಲಿ ಪ್ರಯಾಣಮಾಡಬಾರದು. ಆನೆ ಕುದುರೆಗಳು ಮುಗ್ಗರಿಸಬಾರದು ಕಾಗೆಯು ಕೂಗುತ್ತಾ ಅಪಸವ್ಯವಾಗಿ ಹೋಗಬಾರದು. ಗೂಬೆಯು ಧ್ವನಿಮಾಡಬಾರದು ಇತ್ಯಾದಿ.

ಈ ಅಪಶಕುನಗಳು ಒಂದೊಂದೇ ಪ್ರಾಣಹಾನಿಕರವಾಗಿರುವಾಗ ಎಲ್ಲವೂ ಸೇರಿದರಂತು ಕೇಳಬೇಕಾದುದಿಲ್ಲ. ರಾಜನು ಪಟ್ಟದ ಕುದುರೆಯನ್ನೇರುತ್ತಲೇ ಅದು ಮುಗ್ಗರಿಸಿತು. ರಾಜನ ಕಿರೀಟವು ನೆಲಕ್ಕೆ ಬಿದ್ದು ಚೂರ್ಣಿತವಾಯಿತು. ಕುದುರೆಯನ್ನು ಬಿಟ್ಟು ದೊರೆಯು ಆನೆಯನ್ನೇರಿದನು. ಒಂದರ ಹಿಂದೊಂದು ಅಶುಭ ಸೂಚನೆಯಾಗುತ್ತಿರುವದನ್ನು ಕಂಡು—

ಮಂತ್ರಿ—ಮಹಾರಾಜನೆ, ದುಷ್ಕಾಲವೆಂದು ಕಾಣುತ್ತದೆ. ಸದ್ಯಕ್ಕೆ ಪ್ರಯಾಣವನ್ನು ನಿಲ್ಲಿಸುವದುತ್ತಮ.

ರಾಜ—ವಿಷ್ಣುವರ್ಧನನಿಗೆ ದುಷ್ಕಾಲವೆಂದರೇನು ?

ಮಂತ್ರಿ—ಇಲ್ಲ ಮಹಾಪ್ರಭೋ; ವಿಪರೀತ ಲಕ್ಷಣಗಳು ಕಂಡುಬರುತ್ತಿವೆ.

ರಾಜ—ಕುದುರೆ ಮುಗ್ಗರಿಸಿತೆಂದು ಹೇಳುವೆಯಾ ?

ಮಂತ್ರಿ—ಅಷ್ಟೇ ಅಲ್ಲ, ಕಿರೀಟ !

ರಾಜ—ಅರಮನೆಯಲ್ಲಿ ಕಿರೀಟಗಳಿಗೆ ಕಡಮೆಯೇ ?

ಮಂತಿ—ಇವತ್ತು ಅಷ್ಟಮಿ, ಮಂಗಳವಾರ, ಆದ್ರ್ರಾ ನಕ್ಷತ್ರ, ಇದು ಸಂಧ್ಯಾಕಾಲ, ಮತ್ತು ಇವತ್ತು ವೈಧೃತಿ, ಸರ್ವಥಾ ಪ್ರಯಾಣಯೋಗ್ಯವಲ್ಲ.

ರಾಜ—ಅಷ್ಟಮಿ ಆದ್ರ್ರಾಯೋಗಗಳು ಶಿವದೇವತಾಕಗಳು.

ಮಂತ್ರಿ—ಶಿವಪೂಜೆಗೆ ಮಾತ್ರ ! ಪ್ರಯಾಣಕ್ಕಲ್ಲ. ಮೌಹೂರ್ತಿಕರಿರುವರು. ವಿಚಾರಿಸಬೇಕು.

ರಾಜ—ಮೌಹೂರ್ತಿಕರು ವಂಚಕರು. ಅವರಿಂದಲೇ ಇಷ್ಟು ಕಾಲಹರಣವಾಯಿತು.

ಮಂತ್ರಿ—ಹಾಗಲ್ಲ, ಮತ್ತೆ ಒಳ್ಳೇದಿವಸ ನೋಡಿ ಪ್ರಯಾಣ ಮಾಡೋಣ !

ರಾಜ—ಹೊರಟಮೇಲೆ ಹಿಂದಿರುಗಬಾರದು. ಶಕುನಕ್ಕಿಂತ ಮನೋಜಯ ದೊಡ್ಡದು.

ಮಂತ್ರಿ—ಪ್ರಭುಚಿತ್ತ.

ಈ ಸಂಭಾಷಣೆಗಳನ್ನು ಕೇಳುತ್ತಾ ರಾಜನನ್ನು ಹಿಂಬಾಲಿಸಿ ಬರುತ್ತಿದ್ದ ಓರ್ವಪಂಡಿತನು ಆತುರದಿಂದ ಎದುರಿಗೆ ಬಂದುನಿಂತು— 'ಏನು ವಿಾತು ? ಯಾತರ ಯುದ್ಧ? ಯಾವ ರಾಜ್ಯಸಂಪಾದನೆ ?

ಇಂಥಾ ಯುದ್ಧಯಾತ್ರೆಗೆ ಕಾರಣವೇನು? ಈಗ ಪ್ರಾಪ್ತವಾಗಿರುವ ರಾಜ್ಯಕ್ಷೋಭೆಯೇನು? ವೈಶ್ಯರಮೇಲೆ ಎಂಥಾ ಯುದ್ಧ? ಅನ್ಯ ಜಾತಿಯ ಕನ್ನಿಕೆಗಾಗಿ ಯಾತರ ಪ್ರಯತ್ನ? ವೈಶ್ಯಕನ್ನಿಕೆಯನ್ನು ತಂದರೆ ಬರುವ ಲಾಭವೇನು? ಕ್ಷತ್ರಿಯರಲ್ಲಿ ರಾಜಯೋಗ್ಯರಾದ ಕನ್ನಿಕೆಯರಿಲ್ಲವೆ? ರಾಣಿವಾಸದಲ್ಲಿ ಸುಂದರಿಯರಿಗಭಾವವೆ? ವೈಶ್ಯ ಕನ್ಯಾ ವಿವಾಹದಿಂದ ಸಂಕೀರ್ಣಜಾತಿಯುಂಟಾಗುವದಿಲ್ಲವೆ? ವೈಶ್ಯ ಪತ್ನಿಯಲ್ಲಿ ಜನಿಸುವ ಕುಮಾರನು ರಾಜ್ಯಾರ್ಹನಾಗುವನೆ? ಜಾತಿ ಸಾಂಕರ್ಯದಿಂದ ವಂಶನಾಶವಾಗುವದಿಲ್ಲವೆ? ಈ ಪ್ರಯಾಣವು ಸರ್ವಥಾ ಯೋಗ್ಯವಲ್ಲ. ಇದುವರೆಗೆ ಸಂಪಾದಿಸಿದ ರಾಜ್ಯವ್ರಾ ಕೀರ್ತಿಯೂ ನಾಶವಾಗುವದು. ಈ ಉದ್ಯಮವು ಪ್ರಾಣಾಪತ್ತಿನ ದಾಗಿರುವದು. ಮಹಾರಾಜನಿಗೆ ವಿಪರೀತಬುದ್ಧಿ ಬರಬಾರದು. ಹಿತ ಚಿಂತಕರ ಮಾತನ್ನು ಲಾಲಿಸಬೇಕು' ಎಂದು ಧೈರ್ಯದಿಂದ ಹೇಳ ಬಹುದಾದ ಮಾತುಗಳನ್ನು ಹೇಳಿದನು.

ರಾಜನು ಪಂಡಿತನನ್ನು ಗದರಿಸಿ,-'ಹೋಗು ಹೋಗು, ನನಗೆ ನೀತಿಯನ್ನು ಹೇಳಬೇಡ'ವೆಂದು ನುಡಿದು, ಪ್ರಯಾಣವನ್ನು ನಿಲ್ಲಿಸದೆ ಮುಂದರಿಸಿದನು. ಮಂತ್ರಿಗಳಾಗಲಿ ಸೈನಿಕರಾಗಲಿ ಸ್ತ್ರೀನಿಮಿತ್ತವಾಗಿ ಇದೇನೋ ವಿಪತ್ತೀ ಪ್ರಾಪ್ತವಾಯಿತೆಂದು ಅತೃಪ್ತರಾಗಿ ರಾಜಾಜ್ಞೆ ಯನ್ನು ಮೀರಲಾರದೆ ಮಹಾದ್ರಿಪುರದ ಸಮೀಪಕ್ಕೆ ಬಂದರು.

ರಣಭೇರಿಗಳ ನಿನಾದವನ್ನು ಕೇಳಿ ವೈಶ್ಯರು ರಾಜನು ಸೇನಾ ಸಮೇತನಾಗಿ ಬಂದನೆಂದು ತಿಳಿದರು. ವಾದ್ಯವೈಭವದಿಂದ ಎದುರು ಗೊಳ್ಳುವರಂತೆ ಕಾಣಿಕೆಗಳನ್ನು ತೆಗೆದುಕೊಂಡು, ನಗರಪ್ರವೇಶಕ್ಕೆ ಈಗಲೇ ಅವಕಾಶ ಕೊಡಬಾರದೆಂದು ರಾಜನ ಬಳಿಗೆಬಂದು ವಂದಿಸಿ ದರು.-'ಮಹಾರಾಜನೆ, ಸಕಾಲಕ್ಕೆ ಬಂದಂತಾಯಿತು. ಲಗ್ನಕಾಲವು

ಸನ್ನಿಹಿತವಾಗಿರುವದು. ನಮ್ಮ ವಿರೋಧಿಗಳು ನಮ್ಮನ್ನು ಬಿಟ್ಟು ಹೊರಟುಹೋದರು. ಆಗಬೇಕಾದ ಸಿದ್ಧತೆಗಳಾಗುತ್ತಿರುವವು. ನಗರಶೃಂಗಾರ ಪೂರ್ತಿಯಾಗುತ್ತಲು ನಾವೆಲ್ಲರೂ ಎದುರುಗೊಳ್ಳುವದಕ್ಕೆ ಬರುವೆವು. ತಾವು ಈ ಉಪವನದಲ್ಲಿ ವಿಶ್ರಮಿಸಿಕೊಳ್ಳಬೇಕು' ಎಂಬದಾಗಿ ಉಪಚರಿಸಿ, ರಾಜಯೋಗ್ಯವಾದ ಆತಿಥ್ಯನಡೆಯುಲು ತಕ್ಕ ವ್ಯವಸ್ಥೆಮಾಡಿ ನಗರಿಗೆ ಬಂದರು. ತತ್ಕಾಲದಲ್ಲಿ ರಾಜನು ಸಲ್ಲಾಪಗಳಿಂದ ಕಾಲಕಳೆಯುಲೆಂದು ನಗರಬಾಲಕರನ್ನು ರಾಜಸನ್ನಿಧಿಗೆ ಕಳುಹಿಸಿದರು. ಬಂದ ಬಾಲಕರು ರಾಜನೊಡನೆ ವಿನೋದಮಾಡುತ್ತಾ, ತಾವು ತಂದ ಭಕ್ಷ್ಯಭೋಜ್ಯಗಳನ್ನು ರಾಜನಿಗೆ ಕೊಡುತ್ತ, ರಾಜನು ಪ್ರತಿಯಾಗಿ ಕೊಡುವದನ್ನು ಸ್ವೀಕರಿಸುತ್ತಾ ಅವನನ್ನು ಆನಂದ ಸಾಮ್ರಾಜ್ಯದಲ್ಲಿಟ್ಟರು.

ಕುಸುಮಾಂಬೆಯು ರಾಜನು ಸೇನಾಸಮೇತನಾಗಿ ಬಂದನೆಂದು ಕೇಳಿ ಬಹು ದುಃಖಿತಳಾದಳು. ಇನ್ನೇನು! ನಾಳೆಯೇ ಎಲ್ಲರ ಅವತಾರ ಸಮಾಪ್ತಿಯಾಗುವದೆಂದು ಕನ್ನಿಕೆಯನ್ನು ತೊಡೆಯಮೇಲೆ ಕೂಡಿಸಿಕೊಂಡು ಮೈದಡವುತ್ತಾ-'ಅಮ್ಮಾ ವಾಸವಿ' ಎನ್ನುತ್ತಲೇ ಬಿಕ್ಕಿಬಿಕ್ಕಿ ಅಳುತ್ತಾ,-'ಯಾಕಮ್ಮಾ ನನ್ನಂಥ ನಿರ್ಭಾಗ್ಯಳ ಹೊಟ್ಟೆಯಲ್ಲಿ ಹುಟ್ಟಿದೆ'ಯೆಂದು ಗಲ್ಲವನ್ನು ಹಿಡಿದು,-'ಕನ್ನಿಕೆ, ನಾನು ಪಾಪಿ, ನಾನು ನಿರ್ದಯಳು ವನಪಾಲಕನು ನೀರೆರೆದು ಬೆಳೆಸಿದ ಕದಳೀ ವೃಕ್ಷವನ್ನು ಫಲಕಾಲದಲ್ಲಿ ಶಿರಚ್ಛೇದನ ಮಾಡುವಂತೆ ನಿನ್ನನ್ನೂ ನಾಳೆಯೇ ಇದೇ ಕರಗಳಿಂದ ಹುತವಹನಿಗಾಹುತಿ ಕೊಡುವೆನು. ಸುಂದರಾಂಗಿ! ಅಗ್ನಿಕುಂಡದಲ್ಲಿ ಹಾಕಿ ನಿನ್ನನ್ನು ಹೇಗೆ ನೋಡಲಮ್ಮಾ! ವಿಧಿಯು ನನಗೆಂಥಾ ಪಾಪಿಜನ್ಮವನ್ನು ಕೊಟ್ಟನಮ್ಮಾ! ಏನು ಮಾಡಲಿ? ಎಲ್ಲಿ ಹೋಗಲಿ? ವಿಷವನ್ನಾದರೂ ಭುಜಿಸಲೆ? ಕೂಪ ಪ್ರವೇಶಮಾಡಲೆ? ಗತಿ ಏನು?' ಎಂದು ಮೊರೆಯಿಟ್ಟಳು.

ಕುಸುಮಾಂಬೆಯು ರೋದನವನ್ನು ಕೇಳಿ ನಾಗರಿಕರೆಲ್ಲಾ ರೋದನ ಮಾಡಿದರು. ಪಂಜರದಲ್ಲಿರುವ ಗಿಳಿಗಳು - ವಾಸವೀ! ವಾಸವೀ! ಎಂದು ಕೂಗಿ ಕಣ್ಣೀರ್ಗರೆದವು.

ಕಾವೇರಿಯು (ಕುಸುಮಾಂಬೆ) ಮತ್ತೆಮತ್ತೆ -'ವಾಸವಿ! ನಿನಗಾಗಿ ನಾನು ಅಗ್ನಿಪ್ರವೇಶಮಾಡುವೆನು. ನೀನು ಸುಖದಿಂದ ಮನೆಯಲ್ಲಿರು. ನೀನು ಅವತರಿಸಲೆಂದು, ಎಷ್ಟು ದೇವತಾ ಪೂಜೆಮಾಡಿದೆನೊ? ಎಷ್ಟು ಧರ್ಮಮಾಡಿದೆನೊ? ಎಷ್ಟು ಉಪವಾಸ ವ್ರತಗಳನ್ನು ಮಾಡಿದೆನೊ? ಎಷ್ಟು ಕಟುಕಷಾಯಗಳನ್ನು ಕುಡಿದೆನೊ? ಎಷ್ಟು ಪಥ್ಯಮಾಡಿದೆನೊ? ಮಾಡಿದ ಸೇವೆಯೆಲ್ಲಾ ಅಪರಾಧವಾಯಿತಮ್ಮಾ! ಜನ್ಮಾಂತರದಲ್ಲಿ ಯಾರ ಮಕ್ಕಳನ್ನು ಕೊಂದೆ? ಯಾವ ದೇವಬ್ರಾಹ್ಮಣ ದ್ರೋಹಮಾಡಿದೆ? ಆ ಪಾಪವೀಗ ನನ್ನನ್ನು ಕಾಡುತ್ತಿರುವದೆ? ಅಮ್ಮಾ ವಾಸವೀ ವಾಸವೀ!' ಎಂದು ಮೂರ್ಛಿತಳಾದಳು.

ಕನ್ನಿಕೆಯು ತಾಯಿಯನ್ನು ಉಪಚಾರೋಕ್ತಿಗಳಿಂದ ಎಬ್ಬಿಸಿದಳು. -'ಮಾತೆ! ಹೆದರಬೇಡ, ಹೆದರಬೇಡ ನೋಡು—ಲೋಕದಲ್ಲಿ ಯಾರಾಗಲಿ, ಮಗಳನ್ನು ಯುವ್ವನ ಪ್ರಾದುರ್ಭಾವದವರೆಗೆ ಸಂರಕ್ಷಿಸುವರು. ಅನಂತರ ಯಾರಿಗಾದರೂ ವಿವಾಹಮಾಡಿಕೊಡುವರು. ಯುವ್ವನ ಕಾಲದಲ್ಲಿ ಮಗಳು ಪಿತೃಗೃಹದಲ್ಲಿರುವಳಲ್ಲ. ಆದ್ದರಿಂದ ನಾನೂ ನನ್ನ ಗಂಡನ ಮನೆಗೆ ಹೋಗುವೆನು. ಪತಿವ್ರತೆಯೂ ಪರಿಶುದ್ಧಳೂ ಆದ ನಾರಿಯನ್ನು ಅಗ್ನಿಯು ದಹಿಸಲಾರನು. ಲೋಕಮಾತೆಯಾದ ಸೀತೆಯನ್ನು ಅಗ್ನಿಯು ದಹಿಸಿದನೇನು? ಅಗ್ನಿಯಿಂದ ಶುದ್ಧಳಾದ ಸೀತೆಯು ರಾಮಚಂದ್ರನನ್ನಾಲಿಂಗಿಸಲಿಲ್ಲವೇನು? ಹಾಗೆಯೇ ನಾನೂ ಅಗ್ನಿಮುಖದಿಂದ ಶುದ್ಧಳಾಗುವೆನು. ಶ್ರೀಹರಿಯನ್ನಾಲಂಗಿಸುವೆನು ಸೀತಾದೇವಿಯ ಆಶೀರ್ವಾದಮಾತ್ರದಿಂದ

ಹನುಮಂತನ ಬಾಲಕ್ಕೆ ಹಚ್ಚಿದ ಬೆಂಕಿಯು ಶೀತಳವಾಯಿತು. ವಿಷ್ಣು ಭಕ್ತರನ್ನೂ ವಿಷ್ಣುಕಾರ್ಯತತ್ಪರರನ್ನೂ ಅಗ್ನಿಯು ಬಾಧಿಸನು. ನೀನು ಹೆದರಬೇಡ, ಕಾರ್ಯತತ್ಪರಳಾಗು' ಎಂದು ಸಮಾಧಾನ ಗೊಳಿಸಿದಳು.

ಕುಸುಮಾಂಬೆಯು ಮಗಳನ್ನು ನೋಡಿ ಒಮ್ಮೆ ನಗುತ್ತಾ, ಅವಳ ಗುಣಗಳನ್ನು ನೆನೆಸಿಕೊಂಡು ಅಳುತ್ತಾ, ಅವಳ ವಿಶ್ವರೂಪ ವನ್ನು ಸ್ಮರಿಸಿ—'ಅವಳು ಹೇಳುವದು ನಿಜ. ಭಾಸ್ಕರಾಚಾರ್ಯರ ಮಾತು ಸತ್ಯ. ಅವಳು ಸಾಕ್ಷಾಲ್ಲಕ್ಷ್ಮಿಯಹುದು. ಅವಳನ್ನು ಅಗ್ನಿಯು ದಹಿಸಲಾರನು. ರಾಜನು ಅಪಹರಿಸಲಾರನು. ಅವಳು ಶ್ರೀಹರಿ ಯನ್ನು ಸೇರುವಳು. ಅವಳಿಂದ ನಮಗೂ ಸದ್ಗತಿಯಾಗುವದು' ಎಂದು ಧೈರ್ಯವನ್ನು ತಾಳಿದಳು. ವಾಸನಿಗೆ ಸಂಪಿಗೆಯೆಣ್ಣೆ ಯನ್ನೊತ್ತಿ ಕಸ್ತೂರೀ ಕೇಸರ ಪಚ್ಚಕರ್ಪೂರಗಳಿಂದ ಮಿಶ್ರಿತವಾದ ಚೂರ್ಣದಿಂದ ಅಂಗಮರ್ದನಮಾಡಿ, ಸುವಾಸಿತವಾದ ಜಲದಿಂದ ಅಭ್ಯಂಗ ಸ್ನಾನಮಾಡಿಸಿದಳು. ದಿವ್ಯಧೂಪವನ್ನು ಹಾಕಿ ಶುಭ್ರ ವಸ್ತ್ರಗಳನ್ನುಡಿಸಿ ಕಸ್ತೂರೀ ತಿಲಕವಿಟ್ಟು ಮಗಳನ್ನು ದಿವ್ಯಾಭರಣ ಗಳಿಂದಲಂಕರಿಸಿದಳು. ಕನ್ನಿಕೆಯು ಕ್ಷೀರಾಬ್ಧಿಮಥನದಲ್ಲುದಿಸಿದ ಇಂದಿರಾದೇವಿಯಂತೆ ವಿರಾಜಿಸಿದಳು. ಬ್ರಾಹ್ಮಣ ಕ್ಷತ್ರಿಯ ವೈಶ್ಯ ಜಾತಿಯ ಸ್ತ್ರೀಯರೆಲ್ಲರೂ ಮಹೋತ್ಸವದಲ್ಲಿ ಭಾಗಿಗಳಾಗಿ ದಿವ್ಯಾ ಲಂಕಾರಯುಕ್ತರಾಗಿ ಬಂದರು. ಇಷ್ಟುಮಾತ್ರವೇ ಅಲ್ಲ, ನಗರದ ಪಣ್ಯಾಂಗನೆಯರಿಂದ ಪುಣ್ಯಾಂಗನೆಯರವರೆಗೆ ಎಲ್ಲರಿಗೂ ಕನ್ಯಕಾ ಕಲ್ಯಾಣ ಮಹೋತ್ಸವವನ್ನು ನೋಡಬೇಕೆಂಬ ಕುತೂಹಲ ಹುಟ್ಟಿತು. ಒಮ್ಮೆ ಏನೋ ಆನಂದದ ನೋಟವನ್ನು ನೋಡುವೆವೆಂದು ಸಂತೋಷಪಡುತ್ತಾ, ಒಮ್ಮೆ ಕನ್ನಿಕೆಯು ಅಗ್ನಿಪ್ರವೇಶಮಾಡುವ

ಳೆಂಬ ಮಾತನ್ನು ಕೇಳಿ ದುಃಖಪಡುತ್ತಾ, ಆ ಸ್ತ್ರೀಯರೂ ಬಂದು ಸೇರಿದರು.

ಮಹಾ ಯಾಗದೀಕ್ಷಿತರಾದ ವೈಶ್ಯಪ್ರಮುಖರು ಮೌಹೂರ್ತಿಕರನ್ನು ಕರೆಸಿದರು. - 'ದೈವಜ್ಞರೆ, ವಿಷ್ಣುವರ್ಧನ ಮಹಾರಾಜನು ಕನ್ಯಾಹರಣ ಪಾಪಕಾರ್ಯಾಸಕ್ತನಾಗಿ ನಗರದ ಉಪವನದಲ್ಲಿ ಬಂದಿಳಿದಿರುವನು. ನಾವಾದರೋ ಶ್ರೀವಿಷ್ಣುಪ್ರೀತ್ಯರ್ಥವಾಗಿ ಅಗ್ನಿಮುಖದಲ್ಲಿ ಕನ್ನಿಕೆಯನ್ನು ಸಮರ್ಪಿಸುವೆವು. ಈ ವಿವಾಹಕ್ಕೆ ಶುಭಲಗ್ನವನ್ನು ತಾವು ನಿಶ್ಚಯಮಾಡಿಕೊಡಬೇಕು' ಎಂದು ಪ್ರಾರ್ಥಿಸಿದರು. ಅತ್ಯಂತ ವಿಷಾದದಿಂದ ದೈವಜ್ಞರು—'ಮಹಾನುಭಾವರೆ, ತ್ಯಾಗಮೂರ್ತಿಗಳೆ, ಸಂಕಟಕಾಲದಲ್ಲಿ ಲಗ್ನವನ್ನು ನಿಶ್ಚಯಿಸಬೇಕಾದ್ದಿಲ್ಲ. ಜನಸಂಬಾಧೆಯಲ್ಲೂ ಪ್ರಾಣಾಪತ್ತಿನಲ್ಲೂ ಮುಹೂರ್ತವನ್ನು ನೋಡಬೇಕಾದ್ದಿಲ್ಲ.

ತಿಥಿರ್ವಿಷ್ಣುಃ ಹರಿರ್ವಾರಃ ನಕ್ಷತ್ರಂವಿಷ್ಣುರೇವಹಿ ||
ಕಾಲೋಮಾಧವರೂಪೋಸೌ ಕ್ರಿಯತಾಂ ವೈಷ್ಣವೀಕ್ರಿಯಾ ||

ಎಂಬದಾಗಿ ಶಾಸ್ತ್ರವಿರುವದರಿಂದ, ವಿಷ್ಣ್ವರ್ಥವಾಗಿ ಮಾಡುವ ಈ ವಿವಾಹಕ್ಕೆ ಜ್ಯೋತಿಷ್ಯ ಬೇಕಾಗಿಲ್ಲ. ಮಹಾವಿಷ್ಣುವನ್ನು ಕಾಲವು ಬಾಧಿಸುವದಿಲ್ಲ. ಅವನು ಕಾಲಾತೀತನು. ವಿಷ್ಣುವೇ ಜಾಮಾತನಾಗಿರುವದರಿಂದ ಕಾಲವನ್ನು ನೋಡಬೇಕಾದುದಿಲ್ಲ. ಅವನ ಭೀತಿಯಿಂದ ವಾಯುವು ಚಲಿಸುವನು. ಅವನ ಭೀತಿಯಿಂದ ಸೂರ್ಯನು ಕಾಲಕಾಲದಲ್ಲುದಿಸುವನು. ಅವನ ಭೀತಿಯಿಂದ ಅಗ್ನಿಯು ಜ್ವಲಿಸುವನು. ಕುರುಪಾಂಡವರ ಯುದ್ಧದಲ್ಲಿ ಅವನ ಭೀತಿಯಿಂದ ಸೈಂಧವನಿಮಿತ್ತವಾಗಿ ಸೂರ್ಯನು ಅಕಾಲದಲ್ಲಿ ಅಸ್ತಂಗತನಾದನು. ಆ ಕಾಲಕಾಲನ ಮಹೋತ್ಸವಕ್ಕೆ ಕಾಲವನ್ನು ನೋಡಬೇಕಾದುದಿಲ್ಲ.

ದೈವಜ್ಞರ ಮಾತನ್ನು ಕೇಳಿ ವೈಶ್ಯರು ಸಂತುಷ್ಟರಾದರು. ಮೋಹರಿ ಮೃದಂಗಾದಿ ವಾದ್ಯಗಳಿಂದ ಸುಮಗುಪ್ತನ ಮನೆಗೆ ಬಂದರು. ರತ್ನಪೀಠದಲ್ಲಿ ಕನ್ನಿಕೆಯನ್ನು ಕುಳ್ಳಿರಿಸಿ ನೀರಾಜನ ಮಾಡಿದರು. ಎಲ್ಲರೂ ಕನ್ನಿಕೆಯನ್ನು ಕರೆದುಕೊಂಡು ದೇವಾಲಯಕ್ಕೆ ಬಂದರು. ಸ್ವಾಮಿಯಮುಂದೆ ವಿವಾಹಾರ್ಥವಾಗಿ ತಂದಿದ್ದ ಮಂಗಳ ದ್ರವ್ಯಗಳನ್ನಿಟ್ಟು ನಮಸ್ಕಾರಮಾಡಿದರು. ಸುಮಗುಪ್ತನ ಬಾಯಿಂದ ನಿಶ್ಚಿತಾರ್ಥವಾಕ್ಯಗಳನ್ನು ಹೇಳಿಸಿದರು.

ಕನ್ನಿಕೆಯು—ಇನ್ನೂ 'ದದಾಮಿ' ಯೆಂಬ ವಾಕ್ಯಗಳನ್ನೇ ಆಡುವಿರೇಕೆ? 'ದತ್ತಾ' ಎಂಬದಾಗಿ ವಾಕ್ಕಿನಿಂದಲೂ ಮನಸ್ಸಿನಿಂದಲೂ ನನ್ನನ್ನು ಶ್ರೀಹರಿಗೆ ಕೊಟ್ಟುಬಿಡಿರಿ. ಅನಂತರ ಅಗ್ನಿಮುಖದಲ್ಲಿ ಶುದ್ಧಳಾಗಿ ನಾನು ಶ್ರೀಜನಾರ್ದನನನ್ನು ಸೇರುವೆನು. ಇನ್ನು ನಿಮ್ಮ ಸಂಶಯಬೇಡ. ಭಾಸ್ಕರಾಚಾರ್ಯರ ಮನೆಯಿಂದ ಸುವಾಸಿನಿಯರು ಅಗ್ನಿಯನ್ನು ತರಲಿ. ದೇವಾಲಯದ ಪ್ರಾಂಗಣದಲ್ಲಿ ದೇವರೆದುರಾಗಿ ಅಗ್ನಿಕುಂಡಗಳನ್ನು ರಚನೆಮಾಡಿ ಅಗ್ನಿಯನ್ನು ಪ್ರತಿಷ್ಠಿಸಿರಿ. ವಿಷ್ಣುದೇವತಾಕವಾದ ಮಂತ್ರಗಳಿಂದ ಬ್ರಾಹ್ಮಣರು ಹೋಮಮಾಡಲಿ. ನನ್ನೊಡನೆ ಶುದ್ಧರಾಗಬೇಕೆಂಬುವರೆಲ್ಲರೂ ಅಗ್ನಿಯನ್ನು ಪ್ರವೇಶಿಸಲಿ. ನನ್ನೊಡನೆ ಅಗ್ನಿಪ್ರವೇಶಮಾಡುವ ಸ್ತ್ರೀಯರು ಶ್ರೀಹರಿಯನ್ನು ಸೇರುವರು. ಇದರಲ್ಲಿ ಸಂಶಯವಿಲ್ಲ' ಎಂದು ನುಡಿದಳು.

ಈ ಮಾತುಗಳನ್ನಾಡಿದಾಗ ಕನ್ನಿಕೆಯು ಎಂದಿನ ಕನ್ನಿಕೆಯಾಗಿರಲಿಲ್ಲ.

"ಯಂಕಾಮಯೇ ತಂತಮುಗ್ರಂಕೃಣೋಮಿ, ತಂಬ್ರಹ್ಮಾಣಂ
ತಮೃಷಿಂ ತಂಸುಮೇಧಾಂ"

ಎಂಬ ವಾಕ್ಯಗಳನ್ನಾಡಿದ ಅಂಭ್ರಣಿಯಾಗಿದ್ದಳು. ದೇವಿಯ ವಾಕ್ಯವನ್ನು ಎಲ್ಲೋ ನೂರೆರಡು ಗೋತ್ರದ ವೈಶ್ಯರು ಕೇಳಿದರೆಂದಲ್ಲ. ಅಲ್ಲಿದ್ದ ಬ್ರಾಹ್ಮಣ ಕ್ಷತ್ರಿಯ ಶೂದ್ರ ಹರಿಜನರಾದಿಯಾದ ನಗರವಾಸಿಗಳು ಕೇಳಿದರೆಂದಲ್ಲ. ಸ್ವರ್ಗಲೋಕದ ದೇವತೆಗಳು ವಿಮಾನಾರೂಢರಾಗಿ ಆಕಾಶಮಾರ್ಗದಲ್ಲಿ ನಿಂತು ದೇವಿಯ ಸತ್ಯವಾಕ್ಯಗಳನ್ನು ಕೇಳಿ ಕಂಬನಿಗರೆದರು. ದೇವಿಯ ತಲೆಯಮೇಲೆ ಪುಷ್ಪವೃಷ್ಟಿಯನ್ನು ಕರೆದರು. ಜಯಜಯ ಘೋಷವಾಡಿದರು. ಇದನ್ನು ನೋಡಿ ಜನರು ಆಶ್ಚರ್ಯಭರಿತರಾದರು.

ದೇವಿಯ ಆಜ್ಞೆಯಂತೆ ಸುವಾಸಿನಿಯರು ಶ್ರೀಭಾಸ್ಕರಾಚಾರ್ಯರ ಮನೆಗೆ ಬಂದು ಪವಿತ್ರಾಗ್ನಿಯನ್ನು ಯಾಚಿಸಿದರು. ಆಚಾರ್ಯರ ಪತ್ನಿಯಾದ ಮಹಾದೇವಿಯು ಭರ್ತ್ರಾಜ್ಞೆಯಂತೆ ಗಾರ್ಹಪತ್ಯಾಗ್ನಿಯನ್ನು ತಂದುಕೊಟ್ಟಳು. ವೈಶ್ಯಸುವಾಸಿನಿಯರು ನಿಯತಸ್ಥಳದಲ್ಲಿ ಅಗ್ನಿಯನ್ನು ಪ್ರತಿಷ್ಠಿಸಿ ನೀರಾಜನವಾಡಿದರು. ಭಾಸ್ಕರಾಚಾರ್ಯರು ಪತ್ನೀಪುತ್ರರೊಡಗೂಡಿ ಶೋಭಿಸುತ್ತಾ ದೇವಾಲಯಕ್ಕೆ ಬಂದರು. ಸುಮಗುಪ್ತನು ಧ್ವಜಸ್ತಂಭದ ಬಳಿಯಲ್ಲಿ ಆಚಾರ್ಯರನ್ನು ಕಂಡು ಅವರ ಅನುಜ್ಞೆಯನ್ನು ಪಡೆದು ವೈವಾಹಿಕ ಶುಭಕರ್ಮವನ್ನಾರಂಭಿಸಿದನು. ಒಂದೊಂದು ಸಮಯದಲ್ಲೂ ಕೊಡಬೇಕಾದ ದಾನಗಳನ್ನು ಕೊಟ್ಟನು. ನವತಂತುಗಳಿಂದ ರಚಿತವಾದ ಹರಿದ್ರಾಚೂರ್ಣದಿಂದ ಶೋಭಿಸುತ್ತಿರುವ ರಕ್ಷಾಸೂತ್ರವನ್ನು 'ಬೃಹತ್ಸಾಮ' ಎಂಬ ಮಂತ್ರದಿಂದಭಿಮಂತ್ರಿಸಿ ಕನ್ನಿಕೆಯ ವಾಮಹಸ್ತದಲ್ಲಿ ಬಂಧಿಸಿದನು. ವ್ರೀಹಿರಾಶಿಯಮೇಲೆ ದಿವ್ಯಾಲಂಕೃತಳಾದ ಕನ್ನಿಕೆಯನ್ನು ಕುಳ್ಳಿರಿಸಿ ಶ್ರೀಹರಿಗೆ ಸಕಲ ವೈಶ್ಯರೂ ಮಧುಪರ್ಕಾದಿಗಳಿಂದುಪಚರಿಸಿದರು. ಜನಾರ್ದನನೇ ಜಾಮಾತನಾಗಿರುವಾಗ ವೈಶ್ಯರು ದಿವ್ಯರತ್ನಾಭರಣಗಳನ್ನೂ ಸುವರ್ಣವನ್ನೂ ಭೂಮಿಯನ್ನೂ ಬಹುಕ್ಷೀರಪ್ರದಗಳಾದ

ವತ್ಸಸಹಿತಗಳಾದ ಗೋವುಗಳನ್ನೂ, ಶುಭ್ರವರ್ಣಗಳಾದ ವೃಷಭಗಳನ್ನೂ, ಕಾಂಭೋಜ ದೇಶದಲ್ಲುತ್ಪನ್ನವಾದ ದಿವ್ಯಾಶ್ವಗಳನ್ನೂ, ಐರಾವತಕ್ಕೆ ಸಮವಾದ ಗಜಗಳನ್ನೂ, ರತ್ನಖಚಿತವಾದ ಕಿರೀಟ ಕುಂಡಲ ಭುಜಕೀರ್ತಿಗಳನ್ನೂ, ಸಕಲ ಧಾನ್ಯಗಳನ್ನೂ ವರದಕ್ಷಿಣೆಯಾಗಿ ಸಮರ್ಪಿಸಿದರು. ಒಂದೇ ಮಾತಿನಿಂದ ಹೇಳುವದಾದರೆ ವೈಶ್ಯರು ತಮ್ಮ ಸರ್ವಸ್ವವನ್ನೂ ಶ್ರೀಜನಾರ್ದನನಿಗೆ ಸಮರ್ಪಣೆಮಾಡಿ ಧನ್ಯರಾದರು. ಸುಮಗುಪ್ತನು ಪರಮಾತ್ಮನನ್ನು ಬಹು ಸ್ತೋತ್ರ ಮಾಡಿ - 'ನಾನು ಇಂದು ಧನ್ಯನಾದೆ; ಇಂದು ನನ್ನ ಜನ್ಮ ಸಫಲವಾಯಿತು' ಎಂದು ಸಾಷ್ಟಾಂಗ ನಮಸ್ಕಾರಮಾಡಿದನು. ವೃದ್ಧಳಾದ ಕುಸುಮಾಂಬೆಯು ಸುವರ್ಣಪೂರ್ಣ ಕುಂಭವನ್ನು ಗಂಗಾ ಜನಕನಿಗೆ ಸಮರ್ಪಿಸಿ ನಮಸ್ಕರಿಸಿದಳು. ಮತ್ತೆ ದಂಪತಿಗಳು ಎದ್ದು ನಿಂತು—

'ದಾಸ್ಯಾಮಿಕನ್ಯಾಂಕಲ್ಯಾಣೀಂ ಪ್ರಜಾಕಾಮಾಯವಿಷ್ಣವೇ' ಎಂದು ಶ್ರೀಹರಿಗೆ ಕನ್ನಿಕೆಯನ್ನು ಸಮರ್ಪಿಸಿದರು. ಆ ಸಮಯದಲ್ಲಿ ಭೂತಲದಲ್ಲಾದಂತೆ ಅಂತರಿಕ್ಷದಲ್ಲೂ ದೇವದುಂದುಭಿ ಮೊದಲಾದ ವಾದ್ಯಗಳಾದವು. ದೇವತೆಗಳು ಪುಷ್ಪವೃಷ್ಟಿಯನ್ನು ಕರೆದರು. ಸರ್ವರೂ ರಮಾಪತಿಗೆ ನಮಸ್ಕಾರಮಾಡಿದರು. ಕನ್ನಿಕೆಯು ಧನ್ಯಳಾದಳು. ಅವಳ ನಿಮಿತ್ತದಿಂದ ನಾವೂ ಧನ್ಯರಾದೆವು. ಸುಮಗುಪ್ತನು ಧನ್ಯನೆನಿಸಿದನು. ಮಹಾದ್ರಿನಗರವೇ ಧನ್ಯವಾಯಿತು. ವೈಶ್ಯಕುಲವು ಪಾವನವಾಯಿತು' ಎಂದು ಎಲ್ಲರೂ ಧನ್ಯವಾದಗಳನ್ನರ್ಪಿಸಿದರು.

ದ್ವಾಪರದಲ್ಲಿ ನಂದಸುತನು ತನ್ನ ಅವತಾರಚರ್ಯದಿಂದ ವೈಶ್ಯಸಂತತಿಯನ್ನು ಸಂತೋಷಪಡಿಸಿದನು. ಕಲಿಯುಗದಲ್ಲಾ

ದರೋ—ಆ ರಮಾಕಾಂತನೇ ವಾಸವೀಪತಿಯಾಗಿ ವೈಶ್ಯಜಾಮಾತನೆನಿಸಿದನು. ವೈಶ್ಯಸಂತತಿಯನ್ನುದ್ಧರಿಸಿದನು.

ಹೀಗೆ ವಾಸವೀ ಜನಾರ್ದನರ ಕಲ್ಯಾಣಮಹೋತ್ಸವವು ಮಹಾದ್ರಿಯಲ್ಲಿ ಮಹಾವಿಭವದಿಂದ ನೆರವೇರಿತು.



ಇಲ್ಲಿಗೆ ಏಳನೇ ಅಧ್ಯಾಯ ಮುಗಿದುದು.





ಶ್ರೀಮಹಾಲಕ್ಷ್ಮಿ.

# ಎಂಟನೇ ಅಧ್ಯಾಯ



ಶ್ರೀ ಜನಾರ್ದನಸ್ವಾಮಿಗೂ (ಉತ್ಸವ ವಿಗ್ರಹ) ವಾಸವಿಗೂ ಅತ್ಯಂತ ವಿಭವದಿಂದ ವಿವಾಹಮಹೋತ್ಸವವು ನಿರ್ವಿಘ್ನವಾಗಿ ನೆರವೇರಿತು. ಶೂರಭಟರು ನಗರವನ್ನು ಕಾಯುತ್ತಿದ್ದರು ರಾಜದೂತರಿಗೆ ನಗರಪ್ರವೇಶವಾಗಲಿಲ್ಲ. ಹಾರಿ ಪ್ರವೇಶಮಾಡಿದವರು ಹಿಂದಿರುಗಲಿಲ್ಲ. ನಗರದಲ್ಲಾಗುವ ವಾದ್ಯವೈಭವವನ್ನೂ ಹೊರಗಿನಿಂದ ಕಾಣುತ್ತಿರುವ ನಗರ ಶೃಂಗಾರವನ್ನೂ ನೋಡಿ, ತನ್ನನ್ನು ಎದುರುಗೊಳ್ಳಲು ಇಷ್ಟು ಸಂಭ್ರಮ ನಡೆಯುತ್ತಿರುವದೆಂದು ವಿಷ್ಣುವರ್ಧನನು ಹರ್ಷಿತನಾದನು. ವೈಶ್ಯರು ನಡೆಸುತ್ತಿರುವ ಆದರಾತಿಥ್ಯಗಳಿಂದ ರಾಜಪರಿವಾರದವರು ಸಂತುಷ್ಟರಾಗಿದ್ದರು.

ಇತ್ತ ಕಡೆ ದಿವ್ಯವೇದಿಕೆಗಳಿಂದೊಪ್ಪಿ ಸುವಾಸಿನಿಯರು ತಂದ ಯಾಗಶಾಲೆಯ ಪವಿತ್ರಾಗ್ನಿಯಿಂದ ಅಗ್ನಿಕುಂಡಗಳು ಜ್ವಲಿಸಿದವು. ಶ್ರೀಗಂಧ ಮೊದಲಾದ ಸುಗಂಧಕಾಷ್ಟಗಳಿಂದ ಅಗ್ನಿಕುಂಡಗಳು ಭರಿತವಾದವು. ಆಗಮವಿಶಾರದರಾದ ಬ್ರಾಹ್ಮಣರನ್ನು ಮುಂದುಮಾಡಿಕೊಂಡು ಪುರುಷಸೂಕ್ತದಿಂದ ಯಜ್ಞಾಂಗವಾದ ಷೋಡಶಾಹುತಿಗಳನ್ನು ವೈಶ್ಯರು ಸಮರ್ಪಿಸಿದರು. ಮಧು ಆಜ್ಯ ಪಾಯಸ ತಿಲ ಸಮಿತ್ತು ಹಾಲು ಮೊಸರು ಮೊದಲಾದ ಹೋಮದ್ರವ್ಯಗಳನ್ನು ವಿಷ್ಣುಗಾಯಿತ್ರಿಯಿಂದಲೂ, ಷಡಕ್ಷರಿ ಅಷ್ಟಾಕ್ಷರಿ ದ್ವಾದಶಾಕ್ಷರಿ ಮಂತ್ರಗಳಿಂದಲೂ, ಸಹಸ್ರ ಹತ್ತುಸಹಸ್ರ ಈ ರೀತಿ ಹೋಮವಾ

ಯಜ್ಞವನ್ನು ಸಾಂಗಗೊಳಿಸಿದರು. ಮಹಾಯಾಗದಲ್ಲಿ ಮಂತ್ರ ತಂತ್ರಲೋಪಗಳೇನಿದ್ದರೂ ಕ್ಷಮಿಸಿ ಕಾಪಾಡೆಂದು ಶ್ರೀಜನಾರ್ದನ ನನ್ನು ಭಕ್ತಿಯಿಂದ ನಮಿಸಿದರು.

ಅನಂತರ ದಿವ್ಯಾಲಂಕಾರಯುಕ್ತರಾದ ನೂರೆರಡು ದಂಪತಿ ಗಳು ಕನ್ನಿಕೆಯನ್ನು ಹಿಂಬಾಲಿಸಿ ಕುಂಡಸ್ಥಾನದಲ್ಲಿ ಬಂದುನಿಂತರು. ಏತಾದೃಶ ವಿಭವವನ್ನು ನೋಡಲು ವಿಮಾನಾರೂಢರಾಗಿ ಬಂದ ದೇವತೆಗಳು ತಮ್ಮ ಅನಿಮಿಷತ್ವವನ್ನು ಸಾರ್ಥಕಗೊಳಿಸಿಕೊಂಡರು. ಗೋತ್ರಪಾಲಕ ದಂಪತಿಗಳು ವಾಸವವಾಸವಿಯರಿಂದಲೂ ಭಾಸ್ಕರಾ ಚಾರ್ಯರಾದಿಯಾದ ಗುರುಜನರಿಂದಲೂ ಸಹಿತರಾಗಿ, ನಗರೇಶ್ವರ ಜನಾರ್ದನ ದೇವಾಲಯಗಳನ್ನು ಮೂರುಮೂರು ಬಾರಿ ಪ್ರದಕ್ಷಿಣೆ ಮಾಡಿ ಅನಂತ ಪ್ರಣಾಮಗಳನ್ನರ್ಪಿಸಿದರು. ಎಲ್ಲ ದಂಪತಿಗಳೂ ತಮ ತಮಗೆ ನಿಯತವಾಗಿದ್ದ ಕುಂಡಗಳ ಬಳಿ ಕೈಜೋಡಿಸಿ ನಿಂತರು.

**ಈ ಸಮಯದಲ್ಲಿ ವಾಸವಿಯು ಗಂಭೀರನಾದದಿಂದ ಸರ್ವರನ್ನೂ ಕುರಿತು :—**

ಭಗವದಾಜ್ಞೆಯಿಂದ ನಾನು ನಿಮ್ಮ ವಣಿಕ್ಕುಲದಲ್ಲವತರಿಸಿ ದೆನು. ನೀವು ನನ್ನನ್ನು ಅತ್ಯಂತ ಪ್ರೀತಿಗೌರವಗಳಿಂದ ಸಂರಕ್ಷಿಸಿದಿರಿ. ಈಗ ನನ್ನ ಜೊತೆಯಲ್ಲಿ ಅಗ್ನಿಪ್ರವೇಶಮಾಡು ವದಕ್ಕೆ ಸಿದ್ಧರಾಗಿರುವಿರಿ. ನಿಮ್ಮ ಮೇಲಣ ವಿಶ್ವಾಸದಿಂದ ನಿಮ್ಮ ನಿರಂತರ ಶ್ರೇಯೋಭಿಲಾಷಿಯಾಗಿ ನಿಮ್ಮ ಸಂತತಿ ಯವರು ಆಚರಿಸಬೇಕಾದ ಕುಲಧರ್ಮವನ್ನು ನಿಮಗೆ ಉಪ ದೇಶಿಸುವೆನು. ಅಲ್ಲಿಗೆ ನನ್ನ ಅವತಾರಕಾರ್ಯವು ಪೂರ್ತಿ ಯಾಗುವದು' ಎಂದು ಆಜ್ಞೆಗೈದಳು.

ಎಲ್ಲರೂ ಮಹಾಪ್ರಸಾದವೆಂದು ಜಯಘೋಷಮಾಡಿದರು.

---

# ಕನ್ಯಕಾಪರಮೇಶ್ವರಿಯ ಆಜ್ಞಾ.

ಸರ್ವರಿಗೂ ಆಚಾರವು ಪ್ರಥಮಧರ್ಮವು. ಧರ್ಮಕ್ಕೆ ಪ್ರಭುವು ಅಚ್ಯುತನು. ವೇದದ ಆಜ್ಞೆಯು ಧರ್ಮವೆನಿಸುವದು. ಆಜ್ಞಾಪಾಲನೆಯೇ ಆಚಾರವು. ಆಚಾರವನ್ನರಿತವನೂ ಆಚಾರದಂತೆ ನಡೆಯುವವನೂ ಉಪದೇಶದಿಂದ ಇತರರು ಆಚರಿಸುವಂತೆ ಮಾಡುವನೂ ಆಚಾರ್ಯನೆನಿಸುವನು. ಶಿಷ್ಯರ ಅಜ್ಞಾನಾಂಧಕಾರವನ್ನು ಪರಿಹರಿಸಿ ಜ್ಞಾನೋಪದೇಶ ಮಾಡುವನಾದುದರಿಂದ ಆಚಾರ್ಯನು ಗುರುವೆನಿಸುವನು. ಗುರುಪೂಜಾರಹಿತ ಹರಿಪೂಜೆಯು ನಿರರ್ಥಕವಾಗುವದು. ಆದ ಕಾರಣ ಸರ್ವರೂ ಸರ್ವಕರ್ಮಗಳಲ್ಲೂ ಪ್ರಥಮತಃ ಗುರು ಪೂಜಾ ಮಾಡಬೇಕು. ಗುರುವು ಶಿಷ್ಯನ ಪಾಪವನ್ನು ಪರಿಗ್ರಹಿಸಿ ಶಿಷ್ಯನನ್ನು ಪುನೀತನನ್ನಾಗಿ ಮಾಡುವನು ಕುಲೀನನೂ ಗುಣಸಂಪನ್ನನೂ ಭಗವದ್ಭಕ್ತನೂ ವೇದಪಾರಗನೂ ದಯಾಳುವೂ ಶ್ರೋತ್ರಿಯನೂ ಆದ ಬ್ರಾಹ್ಮಣನು ಆಚಾರ್ಯನೆನಿಸುವನು. ನಿಮ್ಮ ಪುಣ್ಯಪರಿಪಾಕದಿಂದ ಭಾಸ್ಕರಾಚಾರ್ಯನಂಥಾ ಆಚಾರ್ಯಪುರುಷನು ನಿಮಗೆ ದೊರೆತಿರುವನು. ಆಚಾರ್ಯನು ಅನೇಕ ಯಜ್ಞಗಳನ್ನುಮಾಡಿ ಸೋಮಪಾನಮಾಡಿದ ಪೂತಾತ್ಮನಾಗಿರುವನು. ನೃಸಿಂಹೋಪಾಸಕನಾಗಿರುವುದರಿಂದ ಶಾಪಾನುಗ್ರಹ ಶಕ್ತನಾಗಿರುವನು. ಇಂಥವನನ್ನು ಪರಂಪರೆಯಾಗಿ ಗುರುತ್ವೇನ ವೈಶ್ಯರು ಪೂಜಿಸಬೇಕು. ಭಾಸ್ಕರಾಚಾರ್ಯನ ಆಜ್ಞೆಯಂತೆ ನಡೆಯುವದರಿಂದ ಸಕಲ ಶ್ರೇಯಸ್ಸುಂಟಾಗುವದು. ಯಜ್ಞದಲ್ಲಿ ಅಧ್ವರ್ಯುವಿನಂತೆ ಕುಲದಲ್ಲಿ ಗುರುವು ಪೂಜಾರ್ಹನು. ಒಬ್ಬ ಅಧ್ವರ್ಯುವನ್ನು ಬಿಟ್ಟು ಮತ್ತೊಬ್ಬನನ್ನು ವರಿಸಿ ಯಜ್ಞಮಾಡುವದು ಹೇಗೆ

ನಿಷ್ಫಲವೋ, ಹೇಗೆ ತಾಮಸವೋ, ಹಾಗೆಯೇ ಸ್ವಗುರುವನ್ನು ಬಿಟ್ಟು ಅನ್ಯನನ್ನಾಶ್ರಯಿಸುವದು ನಿಷ್ಫಲವಾಗುವದು. ಸ್ವಗುರುವನ್ನು ತ್ಯಜಿಸಿ ಅನ್ಯಗುರುವನ್ನಾಶ್ರಯಿಸುವದು ಪಿತೃ ಶ್ರಾದ್ಧವನ್ನು ಬಿಟ್ಟು ಕಾರುಣ್ಯಶ್ರಾದ್ಧಮಾಡಿದಂತಾಗುವದು. ಇದರಂತೆ ಕುಲದೈವವನ್ನು ಬಿಟ್ಟು ಅನ್ಯದೈವವನ್ನು ಪೂಜಿಸುವದು ನಿಷ್ಫಲವು.

ವೈಶ್ಯರಿಗೆ ನಂದಾತ್ಮಜನೆನಿಸಿದ ಶ್ರೀಹರಿಯು ಜನಾರ್ದನ ರೂಪದಿಂದ ಲಭಿಸಿರುವನು. ಆತನು ವೈಶ್ಯರಿಗೆ ಕುಲ ದೇವತೆಯು. ಆತನನ್ನಾಶ್ರಯಿಸಿರುವ ನಾನು ನಿಮ್ಮ ಕುಲ ದೇವಿಯು. ಯಾರು ಜನಾರ್ದನರೂಪಿ ಶ್ರೀಹರಿಯನ್ನು ತ್ಯಜಿಸುವರೋ, ಯಾರು ಲಕ್ಷ್ಮೀಸ್ವರೂಪಳಾದ ನನ್ನನ್ನು ತ್ಯಜಿಸುವರೋ, ಅವರು ದರಿದ್ರರಾಗಿ ನರಕಭಾಜನರಾಗುವರು. ಲಕ್ಷ್ಮಿಯು ವಾಣಿಜ್ಯದಲ್ಲಿ ಲಾಭದಾಯಕಳು; ವಸ್ತುವರ್ಧಿನಿಯು; ಧನಧಾನ್ಯ ಸಮೃದ್ಧಿಯಿಂದ ತುಷ್ಟಿಪುಷ್ಟಿಪ್ರದಳು. ಸರ್ವೈಶ್ವರ್ಯ ಸ್ವರೂಪಿಣಿಯು. ಅಂಥಾ ಲಕ್ಷ್ಮೀಸ್ವರೂಪಳಾದ ನನ್ನನ್ನು ಪೂಜಿಸುವದರಿಂದ ಲಕ್ಷ್ಮೀಪೂಜೆಮಾಡಿದಂತಾಗುವದು. ವಾಣಿಜ್ಯವನ್ನು ಆರಂಭಿಸುವಾಗಲೂ ವಿವಾಹ ಮಾಡುವಾಗಲೂ ಸಂತಾನಪ್ರಾಪ್ತಿಯಾದಾಗಲೂ ನನ್ನನ್ನು ಪೂಜಿಸುವದು ಶ್ರೇಯಸ್ಕರವು. ನನ್ನನ್ನು ಪೂಜಿಸುವವರು ಇಹದಲ್ಲಿ ಸರ್ವಸಮೃದ್ಧಿಯನ್ನೂ ಪರದಲ್ಲಿ ಸ್ವರ್ಗಾದಿಭೋಗಗಳನ್ನೂ ಪಡೆಯುವರು. ವೈಶ್ಯಸಂತತಿಯಲ್ಲಿ ಭಾಗ್ಯಲಕ್ಷ್ಮಿಯಾಗಿ ನಾನು ಬೆಳೆಯುವೆನು. ಉತ್ಸವಕಾಲದಲ್ಲಿ ವೈಶ್ಯರಾದವರು ನನ್ನ ಕಥಾಶ್ರವಣಮಾಡಬೇಕು. ಯಾವತ್ಕಾಲ ಪರ್ಯಂತರ ವೈಶ್ಯರು ನನ್ನನ್ನು ಪೂಜಿಸುವರೋ ತಾವತ್ಕಾಲ

ಪರ್ಯಂತರ ಅವರು ಐಶ್ವರ್ಯವಂತರಾಗಿರುವರು. ತಾವ ತ್ಕಾಲ ಪರ್ಯಂತರ ಅವರ ಮನೆಗಳಲ್ಲಿ ನಾನು ವಾಸಿಸುವೆನು. ಜನಾರ್ದನ ದೇವರಲ್ಲಿ ಭಕ್ತಿಹೀನರಾದವರೂ ಭಾಸ್ಕರಾ ಚಾರ್ಯರನ್ನು ಪರಿತ್ಯಜಿಸುವರೂ ನನ್ನನ್ನು ಪೂಜಿಸದಿರು ವವರೂ ದರಿದ್ರರಾಗುವರು. ಇದರಂತೆ ಈ ಕ್ಷೇತ್ರನಿಯಾಮಕ ನಾದ ನಗರೇಶ್ವರನಲ್ಲಿ ಸಕಲ ವೈಶ್ಯರೂ ಭಕ್ತಿಯಿಡಬೇಕು. ನಾನು ಹೇಳಿದ ಮಾತಿನ ರೀತಿಯನ್ನನುಸರಿಸಿ ನಡೆಯುವವರು ಕಲುಷ ಪಾಪಮುಕ್ತರಾಗಿ ಅಭಿವೃದ್ಧಿಯನ್ನು ಹೊಂದುವರು. ನನ್ನ ಮಾತನ್ನು ಯಾವ ಮಾನಹೀನರು ಮೀರುವರೋ ಅವರು ಐಶ್ವರ್ಯದಿಂದಲೂ ಸಂತತಿಯಿಂದಲೂ ಹೀನರಾಗಿ ನಾಶ ವನ್ನೈದುವರು.

ಪೂರ್ವದಲ್ಲಿ ಪುರಹರನ ಶಾಪದಿಂದ ತಪ್ತರಾದ ವೈಶ್ಯ ಮೂಲಪುರುಷರು ತಪೋಧನರಾಗಿದ್ದುದರಿಂದ ತಮ್ಮ ಪಾಪ ವನ್ನು ವಸ್ತುಜಾತಿಯಲ್ಲಿಟ್ಟು ಶಾಪದೂರರಾದರು. ಕಾಲಕ್ರಮ ದಲ್ಲಿ ವಣಿಗ್ವಂಶಜಾತರು ಧರ್ಮದಲ್ಲಿ ಅನಾದರವನ್ನು ತೋರಿ ಸಿದುದರಿಂದ ಪಾಪಿಗಳಾಗುತ್ತ ಬಂದರು. ಅಂಥವರ ಪಾಪ ಕ್ಷಾಲನೆಗಾಗಿ ಇಂಥಾ ಕರ್ಮವು ಪ್ರವೃತ್ತವಾಯಿತು. ಮುಂ ದಾದರೂ ವೈಶ್ಯರು ಕುಲಧರ್ಮವನ್ನು ಪಾಲಿಸುತ್ತಾ ಧರ್ಮಾತ್ಮ ರಾಗಿ ನಡಿದರೆ ಮೊದಲಿಗಿಂತ ಶತಗುಣಾಧಿಕವಾದ ಶ್ರೇಯ ಸ್ಸನ್ನು ಹೊಂದುವರು.

# ದೇವಿಯ ಕರುಣಾಮಯ ಕಡೆಯವಾಕ್ಯಗಳು.

ವೈಶ್ಯರು ಸ್ವಾಭಾವಿಕವಾಗಿ ನಿರಪರಾಧಿಗಳು. ರಾಜನಾದರೋ ವಿವೇಕಶೂನ್ಯನು. ನನ್ನನ್ನು ವಿವಾಹಮಾಡಿಕೊಳ್ಳಬೇಕೆಂಬ ಅವನ ದುರಾಶೆಯು ವಿಷಸಮಾನವಾಯಿತು. ರಾವಣನೂ ಶಿಶುಪಾಲನೂ ಪೂರ್ವಾವತಾರಗಳಲ್ಲಿ ನನ್ನನ್ನು ಬಯಸಿ ಭಸ್ಮೀಭೂತರಾದರು. ಅವರಂತೆ ವಿಷ್ಣುವರ್ಧನನು ಕ್ಷಿಪ್ರದಲ್ಲಿ ಸುದರ್ಶನಜ್ವಾಲೆಯಿಂದ ಭಸ್ಮೀಭೂತನಾಗುವನು. ಸೌಂದರ್ಯ ನಿಮಿತ್ತವಾಗಿ ವೈಶ್ಯಕುಲಕ್ಕೆ ಇಂತಹ ಮಹದಾಪತ್ತು ಸಂಭವಿಸಿತು. ಇನ್ನುಮುಂದೆ ವೈಶ್ಯಕುಲದಲ್ಲಿ ಬಹು ಸುಂದರಿಯಾದ ಸ್ತ್ರೀಜನಿಸಬೇಡ! ಜನಿಸಬೇಡ!



ಇಲ್ಲಿಗೆ ೮ನೇ ಅಧ್ಯಾಯ ಮುಗಿದುದು.



# ಒಂಭತ್ತನೇ ಅಧ್ಯಾಯ



**ಕನ್ಯಕಾ ಪರಮೇಶ್ವರಿಯು** ವೈಶ್ಯಪ್ರವರರನ್ನು ಕುರಿತು ಮಾಡಿದ ಉಪದೇಶ ವಾಕ್ಯಗಳನ್ನು, ಆ ಮಹಾಸಭೆಯಲ್ಲಿ ಮಂತ್ರ ತಂತ್ರಕ್ರಿಯಾವಿಶಾರದರಾದ ಮಹಾಪಂಡಿತರು, ಹೇಳಿದಂತೆ ಬರೆದುಕೊಂಡರು. ದೇವಿಯ ಉಪದೇಶವು ವೈಶ್ಯರಿಗೆ ಮಾತ್ರವಲ್ಲ - ಸರ್ವರಿಗೂ ಸಮಾನ್ಯವಾಯಿತು.

ಅನಂತರ ದೇವಿಯು ಜ್ವಲಿಸುತ್ತಿರುವ ಸ್ವರ್ಣರೇತಸ್ಸನಾದ ಅಗ್ನಿದೇವನನ್ನು ನೋಡಿದಳು. ಭಾಸ್ಕರಾಚಾರ್ಯರಿಗೂ ತಾಯಿ ತಂದೆಗಳಿಗೂ ಬಂಧುಜನರಿಗೂ ಬಹುವಾಗಿ ನಮಸ್ಕರಿಸಿದಳು. ಸಕಲ ಸಭಾಸದರನ್ನೂ ವಿಪ್ರರನ್ನೂ ಶ್ಲಾಘಿಸಿ,-'ಸನ್ಮಾನ್ಯರೆ! ನೀವು ವರ್ಣಾಶ್ರಮ ಧರ್ಮರಕ್ಷಣೆಗಾಗಿಯೂ ಶ್ರೀಜನಾರ್ದನ ಸ್ವಾಮಿಗಾಗಿಯೂ ನನ್ನ ನಿಮಿತ್ತವಾಗಿಯೂ ಬಹು ಕಷ್ಟಗಳಿಗೊಳಗಾದಿರಿ. ಇಂದಿಗೆ - ಇಲ್ಲಿಗೆ - ನನ್ನ ಜನ್ಮದ ವ್ಯಾಪಾರ ಮುಗಿಯಿತು. ನಾನು ನನ್ನ ಸ್ವಾಮಿಯ ದಿವ್ಯಸನ್ನಿಧಿಯನ್ನೈದುವೆನು. ನನ್ನನ್ನು ಕ್ಷಮಿಸಿರಿ, ನನಗಪ್ಪಣೆಕೊಡಿರಿ' ಎಂದು ಮರ್ತ್ಯಳಂತೆ ಕೈ ಮುಗಿದಳು. ಈ ಮಾತನ್ನು ಕೇಳಿದ ಸುರನರರೆಲ್ಲಾ ರೋದನಮಾಡಿದರು. ದೇವಿಯು ಮತ್ತೆ ಅಗ್ನಿದೇವನನ್ನು ನೋಡಿ:—

'ಮಹಾವಿಷ್ಣುಸ್ವರೂಪನೂ ಹವ್ಯವಾಹನನೂ ಆದ ಅಗ್ನಿಯೇ ನಿನಗೆ ನಮಸ್ಕಾರ! ಯಜ್ಞರೂಪಿಯೂ ತೇಜೋನಿಧಿಯೂ

ಆದ ಹುತಭುಜನೇ! ನಿನಗೆ ನಮಸ್ಕಾರ! ಪ್ರತಿ ಶರೀರಗಳಲ್ಲಿದ್ದು ಪ್ರಾಣಿಗಳನ್ನು ಪೋಷಿಸುವವನೇ ನಿನಗೆ ನಮಸ್ಕಾರ! ಜನರನ್ನು ಪಾವನಮಾಡುವನೂ ಪಾಪನಿಧ್ವಂಸಕನೂ ಆದ ಅನಲನೇ ನಿನಗೆ ನಮಸ್ಕಾರ! ಪ್ರಖ್ಯಾತ ಯಜ್ಞಗಳಲ್ಲಿ ಯಜ್ಞಪುರುಷನಾಮದಿಂದ ಪ್ರಕಟನಾಗುವನೇ ನಿನಗೆ ನಮಸ್ಕಾರ! ವೇದಗಳಿಂದಲೂ ವಿಪ್ರರಿಂದಲೂ ಪ್ರತ್ಯಹದಲ್ಲಿ ಸ್ತೋತ್ರಮಾಡಿಸಿಕೊಳ್ಳುವನೇ ನಿನಗೆ ನಮಸ್ಕಾರ!!'

ಹೀಗೆ ಯಜ್ಞಪುರುಷನಿಗೆ ನಮಸ್ಕಾರಮಾಡಿ, ಕಮಲಾಪತಿಯನ್ನು ಕಣ್ಣಿನಿಂದ ನೋಡುತ್ತಾ, ಶ್ವಾಸವನ್ನು ನಿರೋಧಿಸಿ, ಸರ್ವರೂ ಕಾಣುವಂತೆ ಶ್ರೀಭೂಸ್ವರೂಪಳೂ ವಾಸವೀನಾಮಕಳೂ ಆದ

## ಶ್ರೀ ಕನ್ಯಕಾಪರಮೇಶ್ವರಿಯು

ಅಗ್ನಿಪ್ರವೇಶಮಾಡಿದಳು. ತತ್ಕ್ಷಣ ಸುಮ ದಂಪತಿಗಳೂ **ನಾರಾಯಣ! ನಾರಾಯಣ!** ಎನ್ನುತ್ತಾ ಅಗ್ನಿಪ್ರವೇಶಮಾಡಿದರು.

ಅಮ್ಮನವರು ಅಗ್ನಿಪ್ರವೇಶಮಾಡಿದಕೂಡಲೇ ಅಗ್ನಿಯು ಅದ್ಭುತಾಕಾರವಾಗಿ ಜ್ವಲಿಸಿದನು. ದೇವಿಯು ಶರತ್ಕಾಲದ ವಿದ್ಯುತ್ತಿನಂತೆ ನೀಲಮೇಘಶ್ಯಾಮನಾದ ಶ್ರೀಜನಾರ್ದನನ ವಕ್ಷಸ್ಥಳವನ್ನು ತೇಜೋರೂಪದಿಂದ ಪ್ರವೇಶಿಸಿದಳು.

ಸುಮದಂಪತಿಗಳು ಅಗ್ನಿಪ್ರವೇಶದಿಂದ ಪರಿಶುದ್ಧರೂ ಧನ್ಯರೂ ಆಗಿ ಪುಷ್ಪಮಾಲಾ ಸ್ವರೂಪದಿಂದ ಪರಮಾತ್ಮನ ಪಾದಾರವಿಂದವನ್ನು ಸೇರಿದರು. ದಕ್ಷಿಣಾಂಘ್ರಿಯಲ್ಲಿ ಸುಮಗುಪ್ತನೂ ವಾಮಾಂಘ್ರಿಯಲ್ಲಿ ಕುಸುಮಾಂಬೆಯೂ ಮಾಲಾರೂಪದಿಂದ ವಿರಾಜಿಸಿದರು.

ನೂರೊಂದು ಗೋತ್ರಪಾಲಕ ದಂಪತಿಗಳು ತಮ್ಮ ಮಕ್ಕಳು ಗಳನ್ನು ಆದರದಿಂದ ನೋಡಿ--'ವತ್ಸರಿರಾ! ಕನ್ನಿಕೆಯ ಉಪದೇಶ ವನ್ನು ಕೇಳಿದಿರಾ, ಅವಳು ಉಪದೇಶಿಸಿದ ಧರ್ಮಮಾರ್ಗದಲ್ಲಿ ನಡೆ ಯುವಿರಾ' ಎಂದು ಕೇಳಿದರು. ಮಕ್ಕಳು ಕಂಬನಿಗರೆಯುತ್ತಾ— 'ಕೇಳಿದೆವು ಕೇಳಿದೆವು! ಅದರಂತೆ ನಡೆಯುವೆವು' ಎಂದು ಉದ್ಘೋ ಷಿಸಿದರು. ಮತ್ತೆ—'ಯಾವದು ಕನ್ನಿಕೆಯಿಂದುಪದಿಷ್ಟವಾಯಿತೋ ಅದೇ ವೇದಶಾಸ್ತ್ರಶಾಸ್ತ್ರವು. ಅದೇ ವೈಶ್ಯರ ಅಭಿವೃದ್ಧಿಗೆ ಕಾರ ಣವು. ನಾವು ಕನ್ನಿಕೆಯು ತೋರಿಸಿದ ಮಾರ್ಗದಿಂದ ವಿಷ್ಣುಪದ ವನ್ನೈದುವೆವು. ಈ ಕಾಲವೇ ಮುಕ್ತಿದಾಯಕವು. ಅಗ್ನಿದೇವ ನಿಂದ ಪರಿಶುದ್ಧರಾಗುವೆವು. ಅವ್ಯಯನಾದ ಶ್ರೀಹರಿಯ ದರ್ಶನ ಮಾಡುವೆವು' ಎಂದು ನುಡಿದರು. ಮಕ್ಕಳು ಗದ್ಗದ ಕಂಠರಾಗಿ ಆಡುವದಕ್ಕೆ ಮಾತುಬರದೆ, ತುಂಬಿದ್ದ ಕಾರಣ ನೋಡುವದಕ್ಕೆ ಕಣ್ಣು ಕಾಣದೆ ದಂಡಪ್ರಣಾಮ ಮಾಡಿದರು.

ಗೋತ್ರಪಾಲಕರು ಮಕ್ಕಳನ್ನು ಮತ್ತೆ ಸಂಬೋಧಿಸಿ - ಪುತ್ರ ಪೌತ್ರ ಪಾರಂಪರ್ಯವಾಗಿ ಬದುಕಿರೆಂದು ಹರಸಿದರು. ಮಕ್ಕಳ ನೆತ್ತಿಗಳನ್ನಾಘ್ರಾಣಿಸಿದರು. ಮನದಣಿಯ ಮುದ್ದಿಸಿದರು. ನಿಮ ನಿಮ್ಮ ಮನೆಗಳಿಗೆ ತೆರಳಿರೆಂದು ಬೀಳ್ಕೊಟ್ಟರು.

ಅನಂತರ ಆ ನೂರೊಂದು ದಂಪತಿಗಳು ಅಗ್ನಿದೇವನನ್ನು ಧ್ಯಾನಿಸಿದರು. ನಾರಾಯಣನನ್ನು ಸ್ಮರಿಸಿದರು.—ವಾಸವೀ! ವಾಸವೀ! ಎಂದು ದೇವಿಯ ದಿವ್ಯನಾಮೋಚ್ಚಾರಮಾಡಿದರು. 'ಹರಿಃ ಓಂ' ಎಂದು ನಿರ್ದಿಷ್ಟ ಕುಂಡಗಳಲ್ಲಿ ಧುಮುಕಿದರು. ಜನರು ಹಾಹಾಕಾರಮಾಡಿದರು. ಅಗ್ನಿಪ್ರವೇಶದಿಂದ ಶುದ್ಧರಾದ್ಮ ನೂರೊಂದು ದಂಪತಿಗಳು ವಿಷ್ಣುದೂತರಿಂದ ತರಲ್ಪಟ್ಟ ದಿವ್ಯ

ವಿಮಾನಾರೂಢರಾಗಿ ವಿಷ್ಣುಚಿನ್ಹೆಗಳಿಂದ ವಿರಾಜಿಸುತ್ತಾ ಪರಮ ಪದವನ್ನು ಸೇರಿದರು.

ದೇವಿಯು ವಿದ್ಯುದ್ರೂಪಳಾಗಿ ಶ್ರೀಜನಾರ್ದನನ ವಕ್ಷಸ್ಥಳ ವನ್ನು ಸೇರಿದುದನ್ನೂ, ಸುಮದಂಪತಿಗಳು ವನಮಾಲಾರೂಪದಿಂದ ಜನಾರ್ದನನ ಪಾದಾರವಿಂದಗಳಲ್ಲಿ ವಿರಾಜಿಸುತ್ತಿರುವದನ್ನೂ, ನೂರೊಂದು ಗೋತ್ರಪಾಲಕ ದಂಪತಿಗಳು ಜೀವನ್ಮುಕ್ತರಂತೆ ದೇಹಾಭಿಮಾನ ತೊರೆದು ಅಗ್ನಿಯಿಂದ ಶುದ್ಧರಾಗಿ ವಿಮಾನವನ್ನೇರಿ ಪ್ರಯಾಣಮಾಡುತ್ತಿರುವದನ್ನೂ ಪ್ರತ್ಯಕ್ಷವಾಗಿ ನೋಡಿದ ಜನರು ಹಾಹಾಕಾರಮಾಡುತ್ತಾ, ದೇವದೇವಿಯರನ್ನು ಸ್ತೋತ್ರಮಾಡುತ್ತಾ, ವಿಷ್ಣುವರ್ಧನ ರಾಜನನ್ನು ಶಪಿಸುತ್ತಾ, ಅತ್ಯದ್ಭುತ ಆಶ್ಚರ್ಯ ಆನಂದ ಪರವಶರಾದರು.

ಎಲ್ಲವನ್ನೂ ನೋಡಿ ಮಿತಿಮೀರಿ ಬರುವ ಬಾಷ್ಪಗಳನ್ನು ಕೈ ಬೆರಳಿನಿಂದ ಚಿಮ್ಮುತ್ತಾ, ಶಾಂತತೆಯ ಪರಮಾವಧಿಯನ್ನು ಪ್ರಕಟ ಗೊಳಿಸುತ್ತಾ, ಧ್ವಜಸ್ತಂಭದ ಬಳಿ ಭಾಸ್ಕರಾಚಾರ್ಯರು ನಿಂತಿದ್ದರು.

ಪ್ರೇಕ್ಷಕರು—'ಈ ದಿನವು ಶುಭದಿನವು; ಈ ವಾರ ಶುಭವಾರ; ಈ ಯೋಗ ಶುಭಯೋಗ; ಈ ಮಹೋತ್ಸವವನ್ನು ನೋಡಿದ ನಾವು ಧನ್ಯರು. ಎಂಥಾ ಕನ್ನಿಕೆ! ಆಕೆಯನ್ನು ಸಾಮಾನ್ಯಮರ್ತ್ಯಳೆಂದು ತಿಳಿದಿದ್ದೆವಲ್ಲಾ! ಜನಾರ್ದನನನ್ನು ಪಾಷಾಣಮೂರ್ತಿಯೆಂದು ಭಾವಿ ಸಿದ್ದೆವಲ್ಲಾ! ಏನೇ ಆಗಲಿ, ನಾವು ನರರೂಪದ ಇಂದಿರಾದೇವಿಯನ್ನು ಕಣ್ದಣಿಯ ನೋಡಿದೆವು; ವೈಕುಂಠವಿಮಾನವನ್ನು ನೋಡಿದೆವು; ಅದರಲ್ಲಿ ಕುಳಿತು ಪ್ರಯಾಣಮಾಡಿದ ಭಾಗವತೋತ್ತಮರನ್ನು ಕಂಡೆವು' ಎಂದು ಪರಿಪರಿಯಾಗಿ ನಡೆದ ವೃತ್ತಾಂತವನ್ನು ಮಾತಾಡಿ ಕೊಳ್ಳುತ್ತಾ ತಮ್ಮ ತಮ್ಮ ಮನೆಗಳಿಗೆ ತೆರಳಿದರು. ಆಚಾರ್ಯರು

ಮ್ಲಾನವದನರಾಗಿ ಪುರಕ್ಕೆ ಬಂದರು. ಆಚಾರ್ಯರ ಪತ್ನಿ ಮಹಾದೇವಿಯು ವಾಸವಿಯನ್ನು ಸ್ಮರಿಸಿ, ದುಃಖದ ಎಲ್ಲೆಯನ್ನು ಕಾಣದಂತಾದಳು. ನಗರವು ಶೂನ್ಯಪಟ್ಟಣವಾಯಿತು. ವೈಶ್ಯಯುವಕರೂ ಬಾಲಕಬಾಲಿಕೆಯರೂ ಮಾತಾಪಿತೃವಿಯೋಗ ದುಃಖದಿಂದ ಕಾಲವನ್ನು ಕಲ್ಪಶತವಂತೆ ಕಳೆದರು.

ಸೂರ್ಯನು ಜನರ ದುಃಖವನ್ನು ನೋಡಲಾರದೆಯೋ ಎಂಬಂತೆ ಅಸ್ತಂಗತನಾದನು.

ಅತ್ತ ಪಾಪಿಯಾದ ವಿಷ್ಣುವರ್ಧನನು, ಕನ್ಯಕಾ ಕನ್ಯಕಾ ಎಂದು ಸ್ಮರಿಸುತ್ತಾ—ಇನ್ನೂ ಏಕೆ ಕರೆಯುವದಕ್ಕೆ ಬರಲಿಲ್ಲ! ಮತ್ತೇನು ಉಪಾಯಹೂಡಿ ಕಾಲಹರಣಮಾಡುತ್ತಿರುವರು! ಈ ಜನರನ್ನೀಗಲೇ ಧ್ವಂಸಮಾಡಿ ಬಿಡುವೆನು! ಈ ವಂಚಕರು ಗುಣಸಾಧ್ಯರಲ್ಲ, ಇವರನ್ನು ದಂಡಿಸಲೇಬೇಕು, ಬಲಾತ್ಕಾರದಿಂದ ಕನ್ನಿಕೆಯನ್ನು ಹಿಡಿದು ತರಬೇಕು, ಎಂದು ಕಟಕಟನೆ ಹಲ್ಲುಕಡಿಯುತ್ತಾ, ಮಂತ್ರಿಗಳನ್ನೂ ಸೈನಿಕರನ್ನೂ ನೋಡಿ ಸಿಟ್ಟುಮಾಡುತ್ತಾ, ನಗರಪ್ರವೇಶೋದ್ಯೋಗರತನಾದನು.

ರಾಜನು ಅಷ್ಟರಲ್ಲಿ ನಗರಜ್ವಾಲೆಯು ಚಕ್ರಾಕಾರವಾಗಿ ಬರುತ್ತಿರುವದನ್ನು ಕಂಡನು. ಅದು ಮಹಾವಿಷ್ಣುವಿನ ಸುದರ್ಶನ ಜ್ವಾಲೆಯೆಂದರಿಯದೆ—'ಹೋಹೋ! ಈಗ ನನ್ನನ್ನು ಮದುವೆಗೆ ಎದುರುಗೊಳ್ಳುವದಕ್ಕೆ ಬರುವಂತಿದೆ; ಬರಲಿ ಬರಲಿ!' ಎಂದು ಸಿಂಹಾಸನದಲ್ಲಿ ಕುಳಿತನು. ನಿಮಿಷವೆನ್ನುವದರೊಳಗೆ ಜ್ವಾಲೆಯು ಸುತ್ತಲೂ ಸಹಿಸಲಸದಳವಾಗಿ ವ್ಯಾಪಿಸಿತು. ಜ್ವಾಲೆಯನ್ನು ಸಹಿಸಲಾರದೆ ದಹಿಸುತ್ತಿದೆ ದಹಿಸುತ್ತಿದೆಯೆಂದು ಎಲ್ಲರೂ ಚೀತ್ಕಾರಮಾಡಿದರು. ಆ ಮಹಾಜ್ವಾಲೆಯಲ್ಲಿ ದೀಪದ ಹುಳುವಿನಂತೆ ರಾಜನೂ ಮಶಕ

ಗಳಂತೆ ಅವನ ಪರಿವಾರವೂ ಕ್ಷಣಮಾತ್ರದಲ್ಲಿ ಭಸ್ಮೀಭೂತರಾದರು.

ಬೆಳಗಾಗುತ್ತಲೆ ವೈಶ್ಯಬಾಲಕರು ನಗರದ ಉದ್ಯಾನಕ್ಕೆ ಬಂದು ನೋಡಲು, ರಾಜನಾಗಲಿ ರಾಜಪರಿವಾರವಾಗಲಿ ಕಾಣಿಸಲಿಲ್ಲ. ಎಲ್ಲರ ಭಸ್ಮರಾಶಿಯನ್ನು ಕಂಡ ಅವರೂ ವಿಸ್ಮಿತರಾದರು.

ಅನಂತರ ಬಾಲಕರು ಪಿತೃಗಳಿಗೆ ಔರ್ಧ್ವದೈಹಿಕ ಕ್ರಿಯೆಗಳನ್ನೆಸಗಿದರು. ಒಂದು ತಿಂಗಳಾಗುತ್ತಲೆ ಶ್ರಾದ್ಧಾದಿಕರ್ಮಗಳನ್ನೆಸಗಿ ಪಿತೃದೇವತಾಪ್ರೀತ್ಯರ್ಥವಾಗಿ ಬೇಕಾದ ದಾನಗಳನ್ನು ಮಾಡಿದರು.

## ಕನ್ಯಕಾ ಪ್ರತಿಷ್ಠಾ

ಭಾಸ್ಕರಾಚಾರ್ಯರು ಸಕಲ ವೈಶ್ಯರಿಂದ ಸಹಿತರಾಗಿ ಜನಾರ್ದನ ದೇವಾಲಯದಲ್ಲಿ ಲಕ್ಷ್ಮೀಸ್ವರೂಪಳಾದ ಕನ್ನಿಕೆಯನ್ನು ಪ್ರತಿಷ್ಠಿಸಿ ಮಹಾಪೂಜೆಯನ್ನೂ ಕಲ್ಯಾಣಮಹೋತ್ಸವವನ್ನೂ ನೆರವೇರಿಸಿದರು. ಅದ್ಯಾಪಿ ಭಾಸ್ಕರಾಚಾರ್ಯರು ಅಂಶತ್ವೇನ ಕನ್ಯಕಾಪರಮೇಶ್ವರಿಯನ್ನು ಪೂಜಿಸುವರೆಂದು ಐತಿಹ್ಯವಿರಲು ಶಾಲಂಕಾಯನ ಮಹಾಮುನಿಪ್ರೋಕ್ತವಾದ ಪುರಾಣವಚನವು ಪ್ರಮಾಣವಾಗಿರುವದು.

ಬ್ರಹ್ಮಾಪಿ ಭಾಸ್ಕರಾಚಾರ್ಯ
ರೂಪೇಣ ಧರಣೀತಲೇ ॥
ಪರ್ಸಕನ್ಯಾರ್ಚನಾಂಕುರ್ವ್ವ
ಆಸ್ತೇದ್ಯಾಪಿಶುಭಾವಹಃ ॥

ವಿಷ್ಣುವರ್ಧನನು ಸಕಲ ಸೇನಾಸಮೇತನಾಗಿ ಮೃತನಾದ ಸಂಗತಿಯು ರಾಜಮಹೇಂದ್ರದಲ್ಲಿ ತಿಳಿಯಿತು. ರಾಜಪುತ್ರನಾದ ನರೇಂದ್ರಭೂಪತಿಯೂ ರಾಣಿಯರೂ ಬಹಳ ದುಃಖಿಸಿದರು. ವಿಷ್ಣು

ದ್ವೇಷದಿಂದಲೂ ಕನ್ಯಾಪೇಕ್ಷದಿಂದಲೂ ದುರ್ಮರಣ ಹೊಂದಿದ ತಂದೆಗೆ ಸದ್ಗತಿಯಾಗಲೆಂದು ರಾಜನರೇಂದ್ರನು ಬಹು ಧರ್ಮಗಳನ್ನೆಸಗಿ ಔರ್ಧ್ವದೈಹಿಕ ಕೃತ್ಯಗಳನ್ನು ಮಾಡಿದನು. ಏನುಮಾಡಿದರೂ ರಾಜನರೇಂದ್ರನಿಗೆ ತಂದೆಯ ಪಾಪಾಚರಣೆಯು ಕಣ್ಣುಮುಂದೆ ಚಿತ್ರಿತವಾಗಿ ನಿಲ್ಲುತ್ತಿತ್ತು. ಮಂತ್ರಿಗಳನ್ನೂ ಪುರೋಹಿತರನ್ನೂ ಮನಃಶಾಂತಿಗೆ ಏನುಪಾಯಮಾಡಬೇಕೆಂದು ಕೇಳಿದನು. ಅವರು ಮಹಾದ್ರಿಯಲ್ಲಿ ಕನ್ಯಕಾದೇವಾಲಯ ಪ್ರತಿಷ್ಠೆಯಾಗಿರುವ ಸಂಗತಿಯನ್ನು ತಿಳಿಸಿ ಅಲ್ಲಿಗೆಹೋಗಿ ದೇವಿಯಲ್ಲಿ ಕ್ಷಮೆಬೇಡಿ ಪೂಜಾದಿಗಳನ್ನು ನಡೆಸಬೇಕೆಂತಲೂ, ವೈಶ್ಯಪ್ರಮುಖರೊಡನೆ ಸ್ನೇಹಮಾಡಿಕೊಳ್ಳಬೇಕೆಂತಲೂ ಸೂಚಿಸಿದರು. ಅದೇಪ್ರಕಾರ ರಾಜನರೇಂದ್ರನು ಮಹಾದ್ರಿಪುರಕ್ಕೆ ಬಂದನು ವೈಶ್ಯರಲ್ಲಿ ತನ್ನ ತಂದೆಯು ಹರಿದ್ವೇಷದಿಂದ ಮಾಡಿದ ಮಹಾಪರಾಧವನ್ನು ಕ್ಷಮಿಸಬೇಕೆಂದು ಕೇಳಿಕೊಂಡನು. ವೈಶ್ಯರಾದರೋ—ರಾಜನರೇಂದ್ರನಿಗೆ ರಾಜಯೋಗ್ಯವಾದ ಸನ್ಮಾನಮಾಡಿ ಅವನೊಡನೆ ಮೈತ್ರಿಯನ್ನು ಬೆಳಸಿದರು. ರಾಜನು ದೇವಿಗೆ ಬಹುವಿಧವಾದ ಪೂಜಾದಿಗಳನ್ನು ಮಾಡಿಸಿ ಸೇವೆಮಾಡಿದನು. ಮತ್ತು ದೇವಿಯ ನಿರಂತರಪೂಜೆಯನ್ನು ತನ್ನ ಖರ್ಚಿನಿಂದ ನಡೆಸುವ ಅವಕಾಶಮಾಡಿಕೊಡಬೇಕೆಂದು ವೈಶ್ಯರನ್ನು ಯಾಚಿಸಿದನು. ಕುಸುಮಗುಪ್ತನ ದಾಯಾದನಾದ ವಿರೂಪಾಕ್ಷ ಶ್ರೇಷ್ಠಿಯು—'ನಾವೇ ಅಮ್ಮನವರ ಸೇವಾದಿಗಳನ್ನುನಡೆಸುವೆವು. ರಾಜನ ದ್ರವ್ಯದಿಂದ ದೇವಿಯ ಪೂಜೆ ನಡೆಯಬೇಕಾದುದಿಲ್ಲ' ಎಂದು ತಿರಸ್ಕರಿಸಿದನು. ಚಿಂತಾಪರನಾದ ರಾಜನರೇಂದ್ರನು ತನ್ನ ಸೇವೆಯನ್ನುಸ್ವೀಕರಿಸಿದಲ್ಲದೆ ಅನ್ನೋದಕಗಳನ್ನು ತೆಗೆದುಕೊಳ್ಳುವದಿಲ್ಲವೆಂದು ಜನಾರ್ದನ ದೇವಾಲಯದಲ್ಲಿ ಪ್ರಾಯೋಪವೇಶಮಾಡಿದನು. ಆಚಾರ್ಯರೂ ವಿರೂಪಾಕ್ಷ ಶ್ರೇಷ್ಠಿಯೂ ದೇವಾಲಯದಲ್ಲಿ ಸಜ್ಜನನಾದ ರಾಜನು ಉಪವಾಸ ಮಾಡುತ್ತಿರುವದನ್ನು ಕೇಳಿ ಸಂತಪ್ತರಾಗಿ ನೋಡಲು ಬಂದರು.

ಮಹಾ ಮಂಗಳಾರತಿಯಕಾಲದಲ್ಲಿ ಎಲ್ಲರಿಗೂ ದೇವಿಯ ನಿಜರೂಪ ದರ್ಶನವಾಯಿತು. ವಿರುಪಾಕ್ಷನಿಗೂ ರಾಜನಿಗೂ ದೇವಿಯು ಸ್ವಪ್ನ ದಲ್ಲಿ ಆಜ್ಞೆ ಅಭಯಗಳನ್ನಿತ್ತಳು.

ಮರುದಿನ ನರೇಂದ್ರನು ದೇವಿಯ ಪ್ರೀತ್ಯರ್ಥವಾಗಿ ಬೇಕಾದ ಸೇವೆಗಳನ್ನು ಸಮರ್ಪಿಸಿದನು. ವಿರೂಪಾಕ್ಷನು ಆ ಸೇವೆಗಳನ್ನು ವಿಹಿತ ಧರ್ಮಕಾರ್ಯಗಳಿಗುಪಯೋಗಿಸಿದನು.

ಸುಪ್ರೀತನಾದ ರಾಜನರೇಂದ್ರನು ವೈಶ್ಯರಾಜ್ಯದಲ್ಲಿ (ಹದಿನೆಂಟು ಪಟ್ಟಣಗಳು) ಕನ್ಯಕಾಪರಮೇಶ್ವರಿಗೆ ರಾಜ್ಯಾಭಿಷೇಕ ಮಹೋತ್ಸವವನ್ನು ನಡೆಸಿ ವಿರೂಪಾಕ್ಷನನ್ನು ಯುವರಾಜನನ್ನಾಗಿ ನೇಮಿಸಿ ದೇವಿಯ ಪ್ರಸಾದವನ್ನು ಸ್ವೀಕರಿಸಿ ಪ್ರಯಾಣಮಾಡಿದನು.

ವೈಶ್ಯಯುವಕರು ಅಂದಿನಿಂದ ಕನ್ನಿಕೆಯನ್ನು ಪೂಜಿಸುತ್ತಾ, ಆಕೆಯ ಆಜ್ಞೆಯಂತೆ ನಡೆಯುತ್ತಾ, ಪುತ್ರಪೌತ್ರ ಪಾರಂಪರ್ಯವಾಗಿ ಧನಧಾನ್ಯ ಸಮೃದ್ಧಿಯಿಂದ ಅಭ್ಯುದಯವನ್ನು ಪಡೆದರು. ನಾನಾ ದೇಶಗಳಲ್ಲಿ ವಾಣಿಜ್ಯವೃತ್ತಿಯ ಬಲದಿಂದ ಇವರು ಪ್ರಖ್ಯಾತರಾದರು.

ವೈಶ್ಯರು ಸತ್ಯಾನೃತ ವೃತ್ತಿಯಿಂದ (ವ್ಯಾಪಾರ) ಎಷ್ಟೇ ಧನವಂತರಾದರೂ ವಾಣಿಜ್ಯಶಾಸ್ತ್ರ ನಿಯಮವನ್ನು ಮೀರಿ ಅಧರ್ಮದಿಂದ ಧನಾರ್ಜನೆಮಾಡಲಿಲ್ಲ. ಬಂದ ಧನವನ್ನು ದುರ್ವಿನಿಯೋಗಮಾಡದೆ ಹೆಜ್ಜೆಹೆಜ್ಜೆಗೂ ಪಾಪಭೀತರಾಗಿ ದೇವಬ್ರಾಹ್ಮಣ ಪೂಜಕರಾಗಿ ದೇವಿಯ ಅನುಗ್ರಹಕ್ಕೆ ಪಾತ್ರರಾದರು.

ಈ ಮಹಾನುಭಾವರ ಗುಣವನ್ನು ಶಾಲಂಕಾಯನ ಮಹಾಮುನಿಯು ಹೀಗೆ ವರ್ಣಿಸುತ್ತಾನೆ:—

ಈ ವಣಿಕ್ಶ್ರೇಷ್ಠರ ಕಥೆಯು ಪಾಪಕಲಿತವಾದುದಲ್ಲ. ಒಬ್ಬರನ್ನು ಯಾಚಿಸುವ ವೃತ್ತಿ ಇವರದಲ್ಲ. ಇವರಿಂದ ಜನಪೀಡೆಯಿಲ್ಲ. ವಂಚನೆಯೆಂಬುವದಿಲ್ಲ. ಯಾರು ಬಂದರೂ ಅವರನ್ನು ಉಪಚರಿಸದೆ ಕಳುಹಿಸುವರಲ್ಲ. ಎಂದಿಗೂ ಬ್ರಾಹ್ಮಣಾರಾಧನೆಯನ್ನು ಬಿಡುವರಲ್ಲ. ಒಬ್ಬರಿಗಾದರೂ ಕಠಿಣೋಕ್ತಿಯನ್ನು ನುಡಿಯುವರಲ್ಲ. ಇಲ್ಲವೆಂಬ ಮಾತೇ ಇವರಲ್ಲಿಲ್ಲ.

ಈ ಪ್ರಕಾರವಾಗಿ ಮಂಗಳಕರವಾದ ಕನ್ಯಕೋಪಾಖ್ಯಾನವನ್ನು ನಿಮಗೆ ಹೇಳಿದೆನು. ಈ ದಿವ್ಯಚರಿತ್ರೆಯನ್ನು ಯಾರು ಪಠನೆಮಾಡುವರೋ, ಗುರುಮುಖದಿಂದ ಯಾರು ಶ್ರವಣಮಾಡುವರೋ ಅಂಥವರು ಇಹಪರಗಳಲ್ಲಿ ಸುಖವನ್ನನುಭವಿಸುವರು.

ಈ ಕಥೆಯು ಲಕ್ಷ್ಮೀರೂಪ ಪ್ರಕಥನೆಯು. ವಿಷ್ಣುಮಾಹಾತ್ಮ್ಯ ಕೀರ್ತನೆಯು. ವೈಷ್ಣವಾಖ್ಯಾನ ಬೋಧನೆಯು. ಈ ಆಖ್ಯಾನಶ್ರವಣಮಾಡಿದವರು ಅಜ್ಞಾನದಿಂದ ಮಾಡಿದ ಜಾರತ್ವ ಪಾಪದಿಂದಲೂ, ಭಗವದ್ಭಾಗವತ ದ್ವೇಷಜನಿತ ಪಾಪದಿಂದಲೂ ಮುಕ್ತರಾಗುವರು. ಯವ್ವನದಿಂದಲೂ ಐಶ್ವರ್ಯದಿಂದಲೂ ರಾಜ್ಯಾಧಿಪತ್ಯದಿಂದಲೂ ಯಾವನು ದೇವಿಯನ್ನು ತಿರಸ್ಕರಿಸುವನೋ ಅವನು ಲಕ್ಷ್ಮೀಹೀನನಾಗಿ ವಿಷ್ಣುವರ್ಧನನಂತೆ ದುರ್ಗತಿಯನ್ನೈದುವನು.

ಈ ಕನ್ಯಕಾಖ್ಯಾನವು ನಿಮಗೆ ಮಂಗಳವನ್ನೀಯಲಿ. ವೈಶ್ಯರ್ಷಿನಾಮಕೀರ್ತನವೂ ವಾಸವೀ ಗುಣಕಥನವೂ ಇಹದಲ್ಲಿ ಸಂಪತ್ತನ್ನೂ ಪರದಲ್ಲಿ ಹರಿತೋಷಣವನ್ನೂ ಕೊಡಲಿ. ಕನ್ಯಕಾಖ್ಯಾನವು ನರರಿಗೆ ತುಷ್ಟಿಪುಷ್ಟಿಕರವು; ದುಷ್ಟಭಾವ ನಿವರ್ತಕವು. ಸುಮಗುಪ್ತನು ಮಹಾಭಾಗವತನು. ಸುಮಾಂಬೆಯು ಮಹಾಭಾಗವತಳು. ಈರ್ವರೂ ವನಮಾಲಾಂಶಜಾತರು. ಕನ್ನಿಕೆಯಾದರೋ

ಶ್ರೀಭೂಸ್ವರೂಪಳು. ಗೋದಾದೇವಿಯಾಗಿ ರಂಗನಾಥನನ್ನು ಸೇರಿದವಳಿವಳು. ಈ ಆಖ್ಯಾನಶ್ರವಣದಿಂದ ಆಯುರ್ವೃದ್ಧಿಯಾಗುವದು. ದುಸ್ಸ್ವಪ್ನದೋಷ ಪರಿಹಾರವಾಗುವದು. ಸಕಲ ದಾರಿದ್ರ್ಯನಾಶವಾಗುವದು. ಸಕಲೈಶ್ವರ್ಯ ಪ್ರಾಪ್ತಿಯಾಗುವದು.

ಕನ್ಯಕಾಪುರಾಣವನ್ನು ಕೈಯಿಂದ ಬರೆದು ಪುಸ್ತಕವನ್ನು ಪೂಜಿಸುವವನು ಐಶ್ವರ್ಯವಂತನಾಗುವನು. ಆಶ್ವೀಜಮಾಸದ ಶುಕ್ರವಾರ ರಾತ್ರಿಯಲ್ಲಿ ಯಾವನು ಈ ಪುರಾಣಶ್ರವಣಮಾಡುವನೋ ಅವನು ಭಾಗ್ಯವಂತನು.

ಇದು ಪವಿತ್ರವು. ಇದು ಆರೋಗ್ಯಕರವು. ಭುಕ್ತಿ ಮುಕ್ತಿಪ್ರದಾಯಕವು. ಕನ್ಯಕಾ ಸ್ಮರಣೆಮಾತ್ರದಿಂದ ಶ್ರೀಭೂದೇವಿಯರು ಪ್ರೀತರಾಗುವರು. ಶ್ರೀಹರಿಯು ಸುಪ್ರೀತನಾಗುವನು.

ಪರಮಪಾವನವಾದ ಈ ಚರಿತ್ರೆಯು ಬುದ್ಧಿವಂತರ ಬುದ್ಧಿಗೆ ಮಂತ್ರವು. ಪತಿತಪಾವನ ಮಂತ್ರವು. ಪಾಪತೂಲಾಗ್ನಿಹೋತ್ರವು ಆದ್ದರಿಂದ ಜನರೆ! ವಿಚಿತ್ರಪದಘಟಿತವಾಗಿರುವ ಈ ಚರಿತ್ರೆಯನ್ನು ಪಠಿಸಿರಿ. ಮಂಗಳವಾಗುವದು.

'ಓಂ ತತ್ಸತ್.'

ಇಲ್ಲಿಗೆ ಕನ್ಯಕಾಪುರಾಣ ೯ನೇ ಅಧ್ಯಾಯ
ಮುಗಿದುದು.



# ಹಿಂದೂಸಮಾಜದಲ್ಲಿ ವೈಶ್ಯರಸ್ಥಾನ



ವೈಶ್ಯರು ಚತುರ್ವರ್ಣಾತ್ಮಕವಾದ ಹಿಂದೂಸಮಾಜದಲ್ಲಿ ತೃತೀಯ ಸ್ಥಾನಾಪನ್ನರಾದ ದ್ವಿಜರು. ಆಚಾರವ್ಯವಹಾರಗಳಲ್ಲಿ ಆಹಾರವಿಹಾರಗಳಲ್ಲಿ ಇವರಿಗೂ ಬ್ರಾಹ್ಮಣರಿಗೂ ವಿಶೇಷ ವ್ಯತ್ಯಾಸ ಕಂಡುಬರುವದಿಲ್ಲ. ಬ್ರಾಹ್ಮಣರಂತೆ ಎಲ್ಲ ಹಬ್ಬಹರಿದಿನಗಳನ್ನೂ ವೈಶ್ಯರಾಚರಿಸುತ್ತಾರೆ. ಬ್ರಾಹ್ಮಣ ಕ್ಷತ್ರಿಯರಂತೆ ವೈಶ್ಯರಲ್ಲೂ ಭಲಂದ, ವತ್ಸ, ಸಂಕೀಲರೆಂಬ ಹೆಸರಿನ ಮಂತ್ರದ್ರಷ್ಟ ಮಹರ್ಷಿಗಳಾಗಿದ್ದಾರೆ. ಗ್ರಹದೇವತೆಗಳಲ್ಲಿ ಚಂದ್ರಬುಧರು ವೈಶ್ಯಜಾತಿಯವರು. ವಿಷ್ಣುಪುರಾಣದಲ್ಲಿ ಯಜ್ಞಾಚರಣೆಯಲ್ಲಿ ಅತ್ಯಂತಪ್ರಶಂಸೆಯನ್ನು ಪಡೆದ ಮರುತ್ತಮಹಾರಾಯನು ವೈಶ್ಯಜಾತಿಗೆ ಸೇರಿದವನು. ವೈಶ್ಯರಲ್ಲಿ ಮಂತ್ರದ್ರಷ್ಟಮಹರ್ಷಿಗಳಾದಂತೆ ನಿಖಿಲ ಭೂಮಂಡಲವನ್ನೂ ಪರಿಪಾಲಿಸಿದ ಚಕ್ರವರ್ತಿಗಳಾಗಿದ್ದಾರೆ. ಇತಿಹಾಸ ಕಾಲದಲ್ಲಿ ಗುಪ್ತರಾಜರ ಶೌರ್ಯಾದಿಗುಣಗಳನ್ನು ವರ್ಣಿಸಿ ಬರೆದಿರುವ ಚರಿತ್ರೆಗಳಿಗೆ ಕಡಮೆಯಿಲ್ಲ. ಗುಪ್ತರಾಜರಕಾಲದ ನಾಣ್ಯಗಳೂ ಶಾಸನಗಳೂ ಹೇರಳವಾಗಿ ದೊರೆತಿವೆ. ವೈದುಷ್ಯ (ಪಾಂಡಿತ್ಯ) ದಲ್ಲಿ ವೈಶ್ಯರು ಹಿಂದುಳಿದಿಲ್ಲ. ಮಾಘ ಮತ್ತು ಶೃಂಗಾರನೈಷಧ ಕಾವ್ಯಕರ್ತರು ವೈಶ್ಯರೆಂಬುವದಕ್ಕೆ—

ಮಾಘಾದಿಗ್ರಂಥಾನ್ರಚಯದ್ವಣಿಙ್ಮಾಘೋಮಹಾಮತಿಃ ||
ಸಂಪ್ರತ್ಯಪಿಚಭೂಲೋಕೇ ಮಾಘಂಬಾಲಾ ಪಠಂತಿಹಿ ||

ಮತ್ತು

ಶೃಂಗಾರ ನೈಷಧಾಖ್ಯಾನನಾಯಕೋಬುದ್ಧಿವರ್ಮ ಸದಾ ||
ಮಾಮಿಡೀವಂಶಸಂಜಾತೋಸಿಂಗನಾಖ್ಯೋ ವಿಚಕ್ಷಣಃ ||

ಎಂಬ ಶ್ಲೋಕಗಳು ಬಲವತ್ತರ ಪ್ರಮಾಣಗಳಾಗಿವೆ.

ಶುದ್ಧವೈಶ್ಯರ ನೂರೆರಡು ಗೋತ್ರಪ್ರವರಗಳನ್ನು ಪರಿಶೀಲಿಸಿದರೆ ಎಲ್ಲರೂ ಯಜುಶ್ಶಾಖಾಧ್ಯಾಯಿಗಳೆಂದು ಗೊತ್ತಾಗುತ್ತದೆ. ಪ್ರಮಾದವಶದಿಂದ ಗೋತ್ರಜ್ಞಾನಶೂನ್ಯರಾದ ಜನರ ಉದ್ಧಾರಾರ್ಥವಾಗಿ 'ಭಾಲಂದ, ವಾತ್ಸಪ್ರಿ, ಸಾಂಗಿಲಾ ಇತಿತ್ರ್ಯಾರ್ಷೇಯ ಪ್ರವರಾನ್ವಿತ ಭಾಲಂದಸಗೋತ್ರಃ' ಎಂಬದಾಗಿ ಪ್ರವರವನ್ನೇರ್ಪಡಿಸಿದ್ದಾರೆ. ನೂರೆರಡು ಗೋತ್ರಗಳಲ್ಲಿ ದ್ವ್ಯಾರ್ಷೇಯಗೋತ್ರಗಳು ಅರವತ್ತು ಮೂರು, ತ್ರ್ಯಾರ್ಷೇಯಗೋತ್ರಗಳು ಮೂವತ್ತೆಂಟು ಪಂಚಾರ್ಷೇಯ ಗೋತ್ರ ಒಂದು ಈ ರೀತಿ ವಿಭಾಗವಿದೆ.

ಶರ್ಮೇತಿ ಬ್ರಾಹ್ಮಣಸ್ಯೋಕ್ತಂ
ವರ್ಮೇತಿ ಕ್ಷತ್ರಸಂಶ್ರಯಂ ||
ಗುಪ್ತದಾಸಾತ್ಮಕಂ ನಾಮ
ಪ್ರಶಸ್ತಂ ವೈಶ್ಯಶೂದ್ರಯೋಃ || ೯ ||

ಎಂಬ ಪ್ರಮಾಣಾನುಸಾರ ವೈಶ್ಯರು ಪ್ರವರದಲ್ಲಿ............ಗುಪ್ತೋಹಂಭೋ ಅಭಿವಾದಯೇ ಎಂದು ಪ್ರಣಾಮಮಾಡುತ್ತಾರೆ.



# ಗೋತ್ರಪ್ರವರಗಳು

ಮತ್ತು

# ಸಂಕೇತ ನಾಮಗಳು

## ದ್ವ್ಯಾರ್ಷೇಯ ಗೋತ್ರಗಳು

---

### ೧ ಉತ್ಕೃಷ್ಟ ಋಷಿಃ

ಭಾರ್ಗವ ಔತ್ಕೃಷ್ಟೇತಿ ದ್ವ್ಯಾರ್ಷೇಯಪ್ರವರಾನ್ವಿತ ಉತ್ಕೃಷ್ಟ ಸಗೋತ್ರಃ ; ಆಪಸ್ತಂಭಸೂತ್ರಃ ಯಜುಶ್ಶಾಖಾಧ್ಯಾಯೀ ( ) ಗುಪ್ತೋಽಹಂಭೋ ಅಭಿವಾದಯೇ.

**ಸಂಕೇತನಾಮಗಳು**

೧ ಕನ್ಯಕುಲ, ೨ ಕಾನುಕುಲ, ೩ ಕ್ರಾನುಕುಲ.

---

### ೨ ಋಷ್ಯಶೃಂಗ ಋಷಿಃ

ಆಂಗಿರಸ ಋಷ್ಯಶೃಂಗೇತಿ ದ್ವ್ಯಾರ್ಷೇಯ ಪ್ರವರಾನ್ವಿತ ಋಷ್ಯಶೃಂಗಗೋತ್ರಃ ಆಪಸ್ತಂಭಸೂತ್ರಃ ಯಜುಶ್ಶಾಖಾಧ್ಯಾಯೀ ( ) ಗುಪ್ತೋಽಹಂಭೋ ಅಭಿವಾದಯೇ.

**ಸಂಕೇತನಾಮ**

ಅನಂತಕುಲ

---

### ೩ ಔಚಿಥ್ಯ ಋಷಿಃ

ಅಂಗಿರಸ ಔಚಿಥ್ಯೇತಿದ್ವ್ಯಾರ್ಷೇಯ ಪ್ರವರಾನ್ವಿತ ಔಚಿಥ್ಯಸ ಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿೀ (        ) ಗುಪ್ತೋಽಹಂಭೋ ಅಭಿವಾದಯೇ.

**ಸಂಕೇತನಾಮಗಳು**

೧ ಋನಸಕುಲ, ೨ ಯಾನಸಖಕುಲ, ೩ ಯಾನಸಖಿಕುಲ.

ಸಮಾನಗೋತ್ರ:— ಔಚಿಥ್ಯ, ಪಿಶಾಬರ್ಬಃ

---

### ೪ ಕಪಿಲ ಋಷಿಃ

ಅಂಗಿರಸ ಕಾಪಿಲೇತಿ ದ್ವ್ಯಾರ್ಷೇಯ ಪ್ರವರಾನ್ವಿತ ಕಪಿಲಸ ಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿೀ (        ) ಗುಪ್ತೋಽಹಂಭೋ ಅಭಿವಾದಯೇ.

**ಸಂಕೇತನಾಮಗಳು**

೧ ಮಂಡುಕುಲ, ೨ ಮಂದಕುಲ, ೩ ಹಸ್ತಕುಲ.

---

### ೫ ಕೌಂಡಿನ್ಯ ಋಷಿಃ

ಭಾರ್ಗವಕೌಂಡಿಣ್ಯ ದ್ವ್ಯಾರ್ಷೇಯಪ್ರವರಾನ್ವಿತ ಕೌಂಡಿನ್ಯಸ

ಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ (　　　) ಗುಪ್ತೋಹಂಭೋ ಅಭಿವಾದಯೇ.

## ಸಂಕೇತನಾಮಗಳು

೧ ಘನಲೋಲ, ೨ ಘನಶ್ರೀಲ, ೩ ಘನಶ್ರೀಲಕುಲ.

---

## ೬ ಕೌಂತೇಯ ಋಷಿಃ

ಭಾರ್ಗವ ಕೌಂತೇಯೇತಿ ದ್ವ್ಯಾರ್ಷೇಯ ಪ್ರವರಾನ್ವಿತ ಕೌಂತೇಯಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ (　　　) ಗುಪ್ತೋಹಂಭೋ ಅಭಿವಾದಯೇ.

## ಸಂಕೇತನಾಮ

ಕಾಮಶಿಷ್ಟಕುಲ.

ಸಮಾನಗೋತ್ರ:—೧ ಕೌಂತೇಯಃ, ೨ ಕಾಮ್ಯಕಃ

---

## ೭ ಕೌಶಿಕ ಋಷಿಃ

ಭಾರ್ಗವ ಕೌಶಿಕೇತಿ ದ್ವ್ಯಾರ್ಷೇಯ ಪ್ರವರಾನ್ವಿತ ಕೌಶಿಕಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ (　　　) ಗುಪ್ತೋಹಂಭೋ ಅಭಿವಾದಯೇ.

## ಸಂಕೇತನಾಮ

ಕರಕ ಪಾಲ ಕುಲ.

---

## ೮ ಕೃಷ್ಣ ಋಷಿಃ

ಭಾರ್ಗವಕಾರ್ಷ್ಣೇತಿ ದ್ವ್ಯಾರ್ಷೇಯಪ್ರವರಾನ್ವಿತ ಕೃಷ್ಣಸ ಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ ( ) ಗುಪ್ತೋಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ಧನಕುಲ, ೨ ಧನದಕುಲ, ೩ ಧೇನುಕುಲ.

ಸಮಾನಗೋತ್ರಃ—೧ ಕೃಷ್ಣಃ, ೨ ಕಾರ್ಷ್ಣಃ

---

## ೯ ಚಕ್ರಪಾಣಿ ಋಷಿಃ

ಅಂಗಿರಸ ಚಕ್ರಪಾಣಿ ದ್ವ್ಯಾರ್ಷೇಯ ಪ್ರವರಾನ್ವಿತ ಚಕ್ರ ಪಾಣಿಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ ( ) ಗುಪ್ತೋಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ಚಕ್ರಮೂಲಕುಲ, ೨ ಚಕ್ರಮೂಲಸಕುಲ.

---

## ೧೦ ಜಡಭರತ ಋಷಿಃ

ಭಾರ್ಗವ ಜಡಭರತೇತಿ ದ್ವ್ಯಾರ್ಷೇಯ ಪ್ರವರಾನ್ವಿತ ಜಡಭ ರತಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ ( ) ಗುಪ್ತೋಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ಗುಂಡಕುಲ, ೨ ದೂರಶಿಷ್ಟ, ೩ ದೂರಶಿಷ್ಟಕುಲ.

---

## ೧೧ ಜಂಭಸೂದನ ಋಷಿಃ

ಭಾರ್ಗವಜಾಂಭಸೂದನೇತಿ ದ್ವ್ಯಾರ್ಷೇಯಪ್ರವರಾನ್ವಿತ ಜಂಭಸೂದನಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ (          ) ಗುಪ್ತೋಽಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ತ್ರಿಮೂಲ, ೨ ತ್ರಿಮೂಲಕುಲ.

ಸಮಾನಗೋತ್ರ:—೧ ಜಂಭಸೂದನಃ ೨ ತರುಣಃ ೪ ಮಾಧವಃ.

---

## ೧೨ ಜಾಬಾಲಿ ಋಷಿಃ

ಭಾರ್ಗವಜಾಬಾಲೇತಿ ದ್ವ್ಯಾರ್ಷೇಯ ಪ್ರವರಾನ್ವಿತ ಜಾಬಾಲಿಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ (          ) ಗುಪ್ತೋಽಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ಸುರಿಶಿಷ್ಟಕುಲ, ೨ ಸೂರಶಿಷ್ಟಕುಲ.

---

## ೧೩ ಬಾಭ್ರಿ ಋಷಿಃ

ಭಾರ್ಗವಶಾಂಡಿಲ್ಯೇತಿ ದ್ವ್ಯಾರ್ಷೇಯಪ್ರವರಾನ್ವಿತ ಬಾಭ್ರೇಯಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ (          ) ಗುಪ್ತೋಽಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ಚನಶಿಷ್ಟ, ೨ ಚನಿಶಿಷ್ಟ.

ಸಮಾನಗೋತ್ರ:—೧ ಪಾಭ್ರಿಃ ೨ ಬಾಭ್ರೇಯಃ ೩ ಶಾಂಡಿಲ್ಯಃ.

---

## ೧೪ ಜೀವಂತಿ ಋಷಿಃ

ಭಾರ್ಗವಜೈವಂತೀತಿ ದ್ವ್ಯಾರ್ಷೇಯ ಪ್ರವರಾನ್ವಿತ ಜೀವಂತಿ ಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ ( ) ಗುಪ್ತೋಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ಭ್ರೂತಿಲಾಷವಕುಲ, ೨ ಭ್ರೂಮಶಿಷ್ಯಕುಲ, ೩ ವೃದ್ಧಿಕುಲ.

ಸಮಾನಗೋತ್ರ:—೧ ಜೈವಂತಿ, ೨ ಬೃಹಸ್ಪತಿ.

---

## ೧೫ ತರಣಿಋಷಿಃ

ಭಾರ್ಗವತಾರಣೀತಿದ್ವ್ಯಾರ್ಷೇಯಪ್ರವರಾನ್ವಿತ ತರಣಿಸಗೋತ್ರಃ ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ ( ) ಗುಪ್ತೋಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ತ್ರಿವಿಕ್ರಮಶಿಷ್ಯಸ ೨ ತ್ರಿವಿಕ್ರಮಶಿಷ್ಯಕುಲ.

ಸಮಾನಗೋತ್ರ:—೧ ಜಾಬಾಲಿಃ ೨ ತಾರಣಿಃ ೩ ತ್ರಿಜಟಿಃ.

---

## ೧೬ ತ್ರಿಜಟಿಋಷಿಃ

ಭಾರ್ಗವತ್ರೈಜಟೇತಿ ದ್ವ್ಯಾರ್ಷೇಯಪ್ರವರಾನ್ವಿತ ತ್ರಿಜಟಿಸ

ಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿನಾ ( ) ಗುಪ್ತೋಽಹಂಭೋ ಅಭಿವಾದಯೇ.

## ಸಂಕೇತನಾಮಗಳು

೧ ಉಪರಕುಲ ೨ ಉಶಿರಿಕುಲ

---

## ೧೭ ತೈತ್ರೇಯಋಷಿಃ

ಆಂಗಿರಸತೈತ್ರೇಯೇತಿ ದ್ವ್ಯಾರ್ಷೇಯಪ್ರವರಾನ್ವಿತ ತೈತ್ರೇಯಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿನಾ ( ) ಗುಪ್ತೋಽಹಂಭೋ ಅಭಿವಾದಯೇ.

## ಸಂಕೇತನಾಮಗಳು

೧ ಚಿದುರುಪೇಳ್ಳ ೨ ಚಿದ್ರುಪೇಳ್ಳ ೩ ಚಿದ್ರೂಪ ೪ ಚಿದ್ರೂಪಕುಲ.
ಸಮಾನಗೋತ್ರ:—೧ ತೈತ್ರೇಯಃ ೨ ಪವಿತ್ರಪಾಣಿಃ ೩ ಮತಂಗಃ.

---

## ೧೮ ದುರ್ವಾಸಋಷಿಃ

ಭಾರ್ಗವದೌರ್ವಾಸೇತಿ ದ್ವ್ಯಾರ್ಷೇಯಪ್ರವರಾನ್ವಿತ ದೂರ್ವಾಸಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿನಾ ( ) ಗುಪ್ತೋಽಹಂಭೋ ಅಭಿವಾದಯೇ.

## ಸಂಕೇತನಾಮಗಳು

೧ ದಿದಶ ೨ ದಿದನಕುಲ ೩ ದೆಂತಶುಲ ೪ ದೆಂತಾಶುಲ ೫ ದೆದನಕುಲ.

---

## ೧೯ ದೇವರಾತಋಷಿಃ

ಅಂಗಿರಸದ್ವೈವರಾತೇತಿ ದ್ವ್ಯಾರ್ಷೇಯಪ್ರವರಾನ್ವಿತ ದೇವರಾತಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿ ( ) ಗುಪ್ತೋಽಹಂಭೋಃ ಅಭಿವಾದಯೇ.

### ಸಂಕೇತನಾಮ

ಹಿರರಾಶಿಕುಲ.

---

## ೨೦ ನಾರದಋಷಿಃ

ಭಾರ್ಗವನಾರದೇತಿ ದ್ವ್ಯಾರ್ಷೇಯಪ್ರವರಾನ್ವಿತ ನಾರದಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿ ( ) ಗುಪ್ತೋಽಹಂಭೋಃ ಅಭಿವಾದಯೇ.

### ಸಂಕೇತನಾಮಗಳು

೧ ಪಾಲಕಕುಲ ೨ ಪಾಲಕುಲ.

ಸಮಾನಗೋತ್ರ:—೧ ನಾರದಃ ೨ ಪಾವನಃ.

---

## ೨೧ ನೇತ್ರಪಾದ ಋಷಿಃ

ಭಾರ್ಗವನೇತ್ರಪಾದೇತಿ ದ್ವ್ಯಾರ್ಷೇಯಪ್ರವರಾನ್ವಿತ ನೇತ್ರಪಾದಸಗೋತ್ರಃ ; ಆಪಸ್ತಂಭಸೂತ್ರಃ ಯಜುಶ್ಶಾಖಾಧ್ಯಾಯಿ ( ) ಗುಪ್ತೋಽಹಂಭೋಃ ಅಭಿವಾದಯೇ.

### ಸಂಕೇತನಾಮಗಳು

೧ ಚಂದೋಗುಕುಲ, ೨ ಛಂದೋಗುಕುಲ.

ಸಮಾನಗೋತ್ರ:—೧ ನೇತ್ರಪಾದಃ ೨ ಅತ್ರಿಃ.

## ೨೨ ಪವಿತ್ರಪಾಣಿಋಷಿಃ

ಅಂಗಿರಸ ಪಾವಿತ್ರಪಾಣೇತಿ ದ್ವ್ಯಾರ್ಷೇಯ ಪ್ರವರಾನ್ವಿತ ಪವಿತ್ರಪಾಣಿಸಗೋತ್ರಃ ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ ( ) ಗುಪ್ತೋಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ದಯಶಿಷ್ಟಕುಲ ೨ ದಯಾಶಿಷ್ಟಕುಲ ೩ ದಶಿಷ್ಟಕುಲ ೪ ದೈಶಿಷ್ಟಿಕುಲ ೫ ದೇಶೆಟ್ಲಕುಲ ೬ ದೇಶಿಷ್ಠಕುಲ ೭ ದೈಶಿಷ್ಟಕುಲ.

ಸಮಾನಗೋತ್ರ:—೧ ಪಾವಿತ್ರಪಾಣಿಃ, ೨ ದೇವಲಃ, ೩ ದೌರ್ಯಾಸಃ.

## ೨೩ ಪುಂಡರೀಕ ಋಷಿಃ

ಅಂಗಿರಸ ಪೌಂಡರೀಕೇತಿ ದ್ವ್ಯಾರ್ಷೇಯಪ್ರವರಾನ್ವಿತ ಪುಂಡರೀಕಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ ( ) ಗುಪ್ತೋಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ಅನುಶಿಷ್ಟ ೨ ಅನುಶಿಷ್ಟಕುಲ ೩ ಕ್ರಾನುಕುಲ ೪ ತೊಂಟಕುಲ.

## ೨೪ ಪೌಲಸ್ತ್ಯ ಋಷಿಃ

ಆಂಗಿರಸಪೌಲಸ್ತ್ಯೇತಿ ದ್ವ್ಯಾರ್ಷೇಯಪ್ರವರಾನ್ವಿತ ಪೌಲಸ್ತ್ಯಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ ( ) ಗುಪ್ತೋಽಹಂಭೋ ಅಭಿವಾದಯೇ.

### ಸಂಕೇತನಾಮಗಳು

| | |
|---|---|
| ೧ ಗೋಶೀಲ | ೮ ನಂದಿಗೋಶೀಲ |
| ೨ ಉತ್ತಮಗೋಶೀಲ | ೯ ಪುನಗೋಶೀಲ |
| ೩ ಪಲ್ಲವಗೋಶೀಲ | ೧೦ ಸೂರ್ಯಕುಲ |
| ೪ ಪಟುಗೋಶೀಲ | ೧೧ ಪುನಗೋರ್ಶೀಲ |
| ೫ ಶ್ರೀಗೋಶೀಲ | ೧೨ ಪಟ್ಟುಗೋಶೀಲ |
| ೬ ಭೀಮಗೋಶೀಲ | ೧೩ ಶ್ರೀಪುಂಸಕುಲ |
| ೭ ಸತ್ಯಗೋಶೀಲ | ೧೪ ಪುನಗಶೀಲಕುಲ |

---

## ೨೫ ಪ್ರಾಚೀನ ಋಷಿಃ

ಭಾರ್ಗವಪ್ರಾಚೀನೇತಿದ್ವ್ಯಾರ್ಷೇಯಪ್ರವರಾನ್ವಿತ ಪ್ರಾಚೀನಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ ( ) ಗುಪ್ತೋಽಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ವನಿಶಿಷ್ಟಕುಲ ೨ ವೆನಶಿಷ್ಟಕುಲ ೩ ವೆಲಿಶಿಷ್ಟಕುಲ.

ಸಮಾನಗೋತ್ರ:—೧ ಪ್ರಾಚೀನಃ ೨ ಆಶ್ವಲಾಯನಃ ೩ ಶಮೀಕಃ.

---

## ೨೬ ಬೃಹದಶ್ವ ಋಷಿಃ

ಅಂಗಿರಸಬಾರ್ಹದಶ್ವೇತಿ ದ್ವ್ಯಾರ್ಷೇಯ ಪ್ರವರಾನ್ವಿತ ಬೃಹದಶ್ವಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿ (　　) ಗುಪ್ತೋಽಹಂಭೋ ಅಭಿವಾದಯೇ.

**ಸಂಕೇತನಾಮಗಳು**

೧ ಫೇರುಶಿಷ್ಟ　೨ ಫೇರಿಶಿಷ್ಟ　೩ ಫೈರುಶಿಷ್ಟಕುಲ.

---

## ೨೭ ಬೋಧಾಯನ ಋಷಿಃ

ಭಾರ್ಗವಬೋಧಾಯನೇತಿ ದ್ವ್ಯಾರ್ಷೇಯ ಪ್ರವರಾನ್ವಿತ ಬೋಧಾಯನಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿ (　　) ಗುಪ್ತೋಽಹಂಭೋ ಅಭಿವಾದಯೇ.

**ಸಂಕೇತನಾಮಗಳು**

೧ ಬುದ್ಧಿಕುಲ　೨ ಬುದ್ಧಿ　೩ ಬುಧನಕುಲ.

ಸಮಾನಗೋತ್ರ:—೧ ಬೋಧಾಯನಃ　೨ ಭಾರ್ಗವಃ.

---

## ೨೮ ಭಾರ್ಗವ ಋಷಿಃ

ಭಾರ್ಗವ ಪಾರ್ಥಿವಶಿಷ್ಟೇತಿ ದ್ವ್ಯಾರ್ಷೇಯ ಪ್ರವರಾನ್ವಿತ ಭಾರ್ಗವಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿ (　　) ಗುಪ್ತೋಽಹಂಭೋ ಅಭಿವಾದಯೇ.

**ಸಂಕೇತನಾಮಗಳು**

೧ ಪೃಥಿವಿಶಿಷ್ಟ　೨ ಪೃಥಿವಿಶ್ರೇಷ್ಠ.

---

### ೨೯ ಮಂದಪಾಲ ಋಷಿಃ

ಭಾರ್ಗವಮಂದಪಾಲೇತಿ ದ್ವ್ಯಾರ್ಷೇಯಪ್ರವರಾನ್ವಿತ ಮಂದಪಾಲಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ ( ) ಗುಪ್ತೋಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ವಿನ್ನಸ ೨ ವಿನ್ನಕುಲ ೩ ವಿನುಕುಲ ೪ ವೆನ್ನಕುಲ.

---

### ೩೦ ಮನು ಋಷಿಃ

ಅಂಗಿರಸಮಾನವೇತಿದ್ವ್ಯಾರ್ಷೇಯ ಪ್ರವರಾನ್ವಿತ ಮಾನವಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ ( ) ಗುಪ್ತೋಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ಮನ್ಯಕುಲ ೨ ಮನ್ಯ್ಯಕುಲ ೩ ಮಾನಸಕುಲ
೪ ಮಾನಾಚ್ಚಕುಲ.

ಸಮಾನಗೋತ್ರ:—೧ ಮನುಃ ೨ ಮಾಂಡವ್ಯಃ ೩ ಮುನಿರಾಜಃ.

---

### ೩೧ ಮರೀಚಿಋಷಿಃ

ಭಾರ್ಗವಮಾರೀಚೇತಿ ದ್ವ್ಯಾರ್ಷೇಯಪ್ರವರಾನ್ವಿತ ಮರೀಚಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ ( ) ಗುಪ್ತೋಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ದೀಕ್ಷಮುಶಿಷ್ಟಸ ೨ ದೀಕ್ಷಮುಕುಲ ೩ ದೀಕ್ಷಮುಶಿಷ್ಟಕುಲ

೪ ದೀಕ್ಷಮುಶ್ರೀಷ್ಠ.

ಸಮಾನಗೋತ್ರ:--೧ ಅಕ್ಷಯಃ ೨ ಜಮದಗ್ನಿಃ ೩ ಮರೀಚಿಃ.

---

## ೩೨ ಮಾರ್ಕಾಂಡೇಯ ಋಷಿಃ

ಭಾರ್ಗವಮಾರ್ಕಂಡೇತಿ ದ್ವ್ಯಾರ್ಷೇಯಪ್ರವರಾನ್ವಿತ ಮಾರ್ಕಂಡೇಯಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ (         ) ಗುಪ್ತೋಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ಮೋದುಕುಲ ೨ ಮೋಕರ್ಾಲಕುಲ ೩ ಮೋರುಕ ೪ ಮೋರುಸ.

---

## ೩೩ ಮುನಿರಾಜಋಷಿಃ

ಭಾರ್ಗವಮೌನಿರಾಜೇತಿ ದ್ವ್ಯಾರ್ಷೇಯಪ್ರವರಾನ್ವಿತ ಮುನಿರಾಜಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ (         ) ಗುಪ್ತೋಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ಪದ್ಮಶಿಷ್ಟಸ ೨ ಪದ್ಮಶಿಷ್ಟಕುಲ ೩ ಪದ್ಮಶ್ರೀಷ್ಠ.

ಸಮಾನಗೋತ್ರ:—೧ ಚ್ಯವನಃ ೨ ಮುನಿರಾಜಃ.

---

## ೩೪ ಮೌಂಜಾಯನ ಋಷಿಃ

ಭಾರ್ಗವಮೌಂಜಾಯನೇತಿ ದ್ವ್ಯಾರ್ಷೇಯ ಪ್ರವರಾನ್ವಿತ ಮೌಂಜಾಯನಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ (         ) ಗುಪ್ತೋಹಂಭೋ ಅಭಿವಾದಯೇ.

**ಸಂಕೇತನಾಮಗಳು**

೧ ಮುಂಜುಕುಲ ೨ ಮೌಂಜಿಸ ೩ ಮೌಂಜಿಕುಲ.

ಸಮಾನಗೋತ್ರ:—೧ ಮಲಹಾರಃ ೨ ಮುಂಜಿವ್ರತಃ ೩ ಮೌಂಜಾಯನಃ.

---

## ೩೫ ಯಾಜ್ಞವಲ್ಕ್ಯಋಷಿಃ

ಆಂಗಿರಸಯಾಜ್ಞವಲ್ಕ್ಯೇತಿ ದ್ವ್ಯಾರ್ಷೇಯ ಪ್ರವರಾನ್ವಿತ ಯಾಜ್ಞವಲ್ಕ್ಯಸಗೋತ್ರಃ ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ ( ) ಗುಪ್ತೋಹಂಭೋ ಅಭಿವಾದಯೇ.

**ಸಂಕೇತನಾಮ**

ಅಭಿಮಂಚಿಕುಲ.

---

## ೨೧ ವರತಂತು ಋಷಿಃ

ಆಂಗಿರಸವಾರತಂತವೇತಿ ದ್ವ್ಯಾರ್ಷೇಯಪ್ರವರಾನ್ವಿತ ವರತಂತುಸಗೋತ್ರಃ; ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ ( ) ಗುಪ್ತೋಹಂಭೋ ಅಭಿವಾದಯೇ.

**ಸಂಕೇತನಾಮಗಳು**

೧ ಮಾಸಂತ ೨ ಮಾಸಂತಕುಲ.

ಸಮಾನಗೋತ್ರ:—೧ ಕಪಿಲಾಚಾರ್ಯಃ ೨ ಜಮದಗ್ನಿಃ ೩ ವರತಂತುಃ.

---

## ೩೭ ವರುಣಋಷಿಃ

ಭಾರ್ಗವವಾರುಣೇತಿ ದ್ವ್ಯಾರ್ಷೇಯಪ್ರವರಾನ್ವಿತ ವರುಣ

ಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ (      ) ಗುಪ್ತೋಹಂಭೋ ಅಭಿವಾದಯೇ.

## ಸಂಕೇತನಾಮಗಳು

೧ ಏಲಶಿಷ್ಟಕುಲ ೨ ವೆಲಶಿಷ್ಟಕುಲ ೩ ವೆಲಿಶಿಷ್ಟಕುಲ ೪ ಶಿರಿಶಿಷ್ಟಕುಲ.

ಸಮಾನಗೋತ್ರ:—೧ ಚಂದ್ರಮೌಳಿಃ ೨ ವರುಣಃ.

---

## ೩೮ ವಾಸುದೇವ ಋಷಿಃ

ಭಾರ್ಗವವಾಸುದೇವೇತಿ ದ್ವ್ಯಾರ್ಷೇಯಪ್ರವರಾನ್ವಿತ ವಾಸುದೇವಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ (      ) ಗುಪ್ತೋಹಂಭೋ ಅಭಿವಾದಯೇ.

## ಸಂಕೇತನಾಮಗಳು

೧ ಭೀಮಶಿಷ್ಟ ೨ ಭೀಮಶಿಷ್ಟಕುಲ ೩ ಭೀಮಶ್ರೇಷ್ಟಕುಲ.

ಸಮಾನಗೋತ್ರ:—೧ ವಾಸುದೇವಃ ೨ ಜಾಬಾಲಿಃ.

---

## ೩೯ ವಾಯುವ್ಯ ಋಷಿಃ

ಆಂಗಿರಸಹಯಗ್ರೀವ ವಾಯುವ್ಯಶ್ಚೇತಿ ದ್ವ್ಯಾರ್ಷೇಯ ಪ್ರವರಾನ್ವಿತ ವಾಯುವ್ಯಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ (      ) ಗುಪ್ತೋಹಂಭೋ ಅಭಿವಾದಯೇ.

## ಸಂಕೇತನಾಮಗಳು

೧ ಮ್ರುಂಗಮಕುಲ ೨ ವ್ರಕಶಿಷ್ಟಕುಲ ೩ ವ್ರಕಾಲಕುಲ ೪ ವ್ರಕ್ಕಾಲಕುಲ ೫ ವ್ರುಂಗಮಕುಲ ೬ ವ್ರುಂಗಮೂಲಕುಲ.

ಸಮಾನಗೋತ್ರ:—೧ ವಾಯವ್ಯಃ ೨ ಹಯಗ್ರೀವಃ.

---

## ೪೦ ವಾಲ್ಮೀಕಿ ಋಷಿಃ

ಭಾರ್ಗವವಾಲ್ಮೀಕೇತಿ ದ್ವ್ಯಾರ್ಷೇಯಪ್ರವರಾನ್ವಿತ ವಾಲ್ಮೀಕಿ ಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿಾ (      ) ಗುಪ್ತೋಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ಶುಶಾಲಕುಲ ೨ ಸಕಾಳ್ಯಕುಲ ೩ ಸೂಸಾಲಕುಲ
೪ ಸುಸೋಳ್ಯಕುಲ.

---

## ೪೧ ವಿಷ್ವಕ್ಸೇನ ಋಷಿಃ

ಭಾರ್ಗವವಿಷ್ವಕ್ಸೇನೇತಿ ದ್ವ್ಯಾರ್ಷೇಯ ಪ್ರವರಾನ್ವಿತ ವಿಷ್ವಕ್ಸೇನಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿಾ (      ) ಗುಪ್ತೋಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ಉಪರಿಶಿಷ್ಟ ೨ ವಿಪರಿಶಿಷ್ಠ.

ಸಮಾನಗೋತ್ರ:—೧ ವಿಷ್ವಕ್ಸೇನಃ ೨ ವಾಲಿಖಿಲ್ಯಃ.

---

## ೪೨ ವೈರೋಹಿತ್ಯ ಋಷಿಃ

ಭಾರ್ಗವವೈರೋಹಿತ್ಯೇತಿ ದ್ವ್ಯಾರ್ಷೇಯ ಪ್ರವರಾನ್ವಿತ ವೈರೋಹಿತಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿಾ (      ) ಗುಪ್ತೋಹಂಭೋ ಅಭಿವಾದಯೇ.

## ಸಂಕೇತನಾಮಗಳು

೧ ವಸಂತ   ೨ ವಸಂತಕುಲ.

ಸಮಾನಗೋತ್ರ:—೧ ವರುಣಃ  ೨ ವೈರೋಹಿತ್ಯಃ.

---

## ೪೩ ವ್ಯಾಸಋಷಿಃ

ಭಾರ್ಗವವ್ಯಾಸೇತಿ ದ್ವ್ಯಾರ್ಷೇಯ ಪ್ರವರಾನ್ವಿತ ವ್ಯಾಸ ಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ (      ) ಗುಪ್ತೋಽಹಂಭೋ ಅಭಿವಾದಯೇ.

## ಸಂಕೇತನಾಮಗಳು

೧ ಧನಗು  ೨ ಧನದಕುಲ  ೩ ಧನಗುಕುಲ  ೪ ಧನಗುಂಡಕುಲ.

ಸಮಾನಗೋತ್ರ:—೧ ವ್ಯಾಸಃ  ೨ ಸಂವರ್ತಕಃ.

---

## ೪೪ ಶರಭಂಗ ಋಷಿಃ

ಭಾರ್ಗವಶಾರಭಂಗ ದ್ವ್ಯಾರ್ಷೇಯಪ್ರವರಾನ್ವಿತ ಶರಭಂಗ ಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ (      ) ಗುಪ್ತೋಽಹಂಭೋ ಅಭಿವಾದಯೇ.

## ಸಂಕೇತನಾಮಗಳು

೧ ಕ್ರಮುಶಿಷ್ಠ  ೨ ಕ್ರಮುಶ್ರೇಷ್ಠಕುಲ  ೩ ಕ್ರಮುಶಿಷ್ಟಕುಲ.

ಸಮಾನಗೋತ್ರ:—೧ ಶರಭಂಗಃ  ೨ ಕಾಂಕ್ಷೀವತಃ.

---

## ೪೫ ಶಾರ್ಙ್ಗರವ ಋಷಿಃ

ಭಾರ್ಗವಶಾರ್ಙ್ಗರವೇತಿ ದ್ವ್ಯಾರ್ಷೇಯಪ್ರವರಾನ್ವಿತ ಶಾರ್ಙ

ರವಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿೀ ( ) ಗುಪ್ತೋಹಂಭೋ ಅಭಿವಾದಯೇ.

**ಸಂಕೇತನಾಮಗಳು**

೧ ಗುಂಡಕಕುಲ ೨ ಗೋಂಡಕಕುಲ.

---

## ೪೬ ಶಾಂಡಿಲ್ಯ ಋಷಿಃ

ಭಾರ್ಗವಶಾಂಡಿಲ್ಯೇತಿ ದ್ವ್ಯಾರ್ಷೇಯಪ್ರವರಾನ್ವಿತ ಶಾಂಡಿಲ್ಯ ಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿೀ ( ) ಗುಪ್ತೋಹಂಭೋ ಅಭಿವಾದಯೇ.

**ಸಂಕೇತನಾಮಗಳು**

೧ ತುಪಾಲ ೨ ತುಪ್ಪಾಲಕುಲ.

ಸಮಾನಗೋತ್ರ:—೧ ಶಾಂಡಿಲ್ಯಃ ೨ ತುಂಬುರುಃ.

---

## ೪೭ ಶ್ರೀಧರ ಋಷಿಃ

ಭಾರ್ಗವಶ್ರೀಧರೇತಿ ದ್ವ್ಯಾರ್ಷೇಯ ಪ್ರವರಾನ್ವಿತ ಶ್ರೀಧರ ಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿೀ ( ) ಗುಪ್ತೋಹಂಭೋ ಅಭಿವಾದಯೇ.

**ಸಂಕೇತನಾಮಗಳು**

೧ ಶಿರಿಶೆಪ್ಪ ೨ ಶಿರಿಶೆಪ್ಪಕುಲ ೩ ಶ್ರೀಶಿಪ್ಪ.

ಸಮಾನಗೋತ್ರ:—೧ ಶಾಂಡಿಲ್ಯಃ ೨ ಶ್ರೀಧರಃ.

---

### ೪೮ ಶುಕ್ಲ ಋಷಿಃ

ಭಾರ್ಗವಶೌಕ್ಲೇತಿ ದ್ವ್ಯಾರ್ಷೇಯ ಪ್ರವರಾನ್ವಿತ ಶುಕ್ಲ ಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ ( ) ಗುಪ್ತೋಽಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ಶ್ರೀಶಾಲಕುಲ ೨ ಶ್ರೀಸಾಳ್ಯ ೩ ಶ್ರೀಸಾಳ್ಯಕುಲ.

ಸಮಾನಗೋತ್ರ:—೧ ಶುಕ್ಲಃ ೨ ಕಾಕ್ಷಿತಪಃ.

---

### ೪೯ ಶೌಚೇಯ ಋಷಿಃ

ಭಾರ್ಗವಕೃಷ್ಣದ್ವೈಪಾಯನೇತಿ ದ್ವ್ಯಾರ್ಷೇಯಪ್ರವರಾನ್ವಿತ ಶೌಚೇಯಸಗೋತ್ರಃ ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ ( ) ಗುಪ್ತೋಽಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ಇಲಮಂಚಿಕುಲ ೨ ಯಲಮಂಚಿಕುಲ ೩ ಹೇಲಮಂಚಿಕುಲ.

ಸಮಾನಗೋತ್ರ:—೧ ಶೌಚೇಯಃ ೨ ಶುಚಿಃ
೩ ಕೃಷ್ಣದ್ವೈಪಾಯನಃ.

---

### ೫೦ ಶೌನಕ ಋಷಿಃ

ಭಾರ್ಗವಶೌನಕೇತಿ ದ್ವ್ಯಾರ್ಷೇಯಪ್ರವರಾನ್ವಿತ ಶೌನಕ ಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ ( ) ಗುಪ್ತೋಽಹಂಭೋ ಅಭಿವಾದಯೇ.

**ಸಂಕೇತನಾಮಗಳು**

೧ ಕಮಲಕುಲ ೨ ತೃಕಶಿಷ್ಟಕುಲ ೩ ತೃಕಶಿಷ್ಟ ೪ ಧನದಕುಲ ೫ ಶನಕಾಲಕುಲ ೬ ಶೌನಕುಲ.

ಸಮಾನಗೋತ್ರ:—೧ ತುರ್ಯವ್ರತಃ ೨ ಶುಕಃ ೩ ಶೌನಕಃ ೪ ಶರಭಂಗಃ.

---

**೫೧ ಸನಕ ಋುಷಿಃ**

ಅಂಗಿರಸಶಾಕಲ್ಯ ದ್ವ್ಯಾರ್ಷೇಯ ಪ್ರವರಾನ್ವಿತ ಸನಕ ಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ ( ) ಗುಪ್ತೋಹಂಭೋ ಅಭಿವಾದಯೇ.

**ಸಂಕೇತನಾಮಗಳು**

೧ ಶಾನಕುಲ ೨ ಸನಕುಲ.

ಸಮಾನಗೋತ್ರ:—೧ ಶಾಕಲ್ಯಃ ೨ ಸನಕಃ.

---

**೫೨ ಸನತ್ಕುಮಾರ ಋುಷಿಃ**

ಭಾರ್ಗವಸಾನತ್ಕುಮಾರೇತಿ ದ್ವ್ಯಾರ್ಷೇಯ ಪ್ರವರಾನ್ವಿತ ಸನತ್ಕುಮಾರಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ ( ) ಗುಪ್ತೋಹಂಭೋ ಅಭಿವಾದಯೇ.

**ಸಂಕೇತನಾಮಗಳು**

೧ ದಂಕಾರಕುಲ ೨ ಮುದ್ದುಕುಲ.

ಸಮಾನಗೋತ್ರ:—೧ ಮಹಾಸೇನಃ ೨ ಮಾಂಡವ್ಯಃ ೩ ಸಾನತ್ಕುಮಾರಃ.

---

## ೫೩ ಸನಂದನ ಋಷಿಃ

ಭಾರ್ಗವಸಾನಂದನೇತಿ ದ್ವ್ಯಾರ್ಷೇಯಪ್ರವರಾನ್ವಿತ ಸನಂದನ ಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿಾ ( ) ಗುಪ್ತೋಹಂಭೋ ಅಭಿವಾದಯೇ.

### ಸಂಕೇತನಾಮ

೧ ಸಮುಶಿಷ್ಟಕುಲ.

---

## ೫೪ ಸಂವರ್ತಕ ಋಷಿಃ

ಭಾರ್ಗವಸಾಂವರ್ತಕೇತಿ ದ್ವ್ಯಾರ್ಷೇಯಪ್ರವರಾನ್ವಿತ ಸಂವರ್ತಕಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿಾ ( ) ಗುಪ್ತೋಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ರೆಂಟಕುಲ ೨ ರೆಂಟುಕುಲ.

---

## ೫೫ ಸುಕಾಂಚನ ಋಷಿಃ

ಭಾರ್ಗವಸೌಕಾಂಚನೇತಿ ದ್ವ್ಯಾರ್ಷೇಯಪ್ರವರಾನ್ವಿತ ಸುಕಾಂಚನಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿಾ ( ) ಗುಪ್ತೋಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ಪುಚ್ಚಕುಲ ೨ ಪುಚ್ಚಕಶಿಲ ೩ ಪುನೀತ ೪ ಪುನೀತಸ ೫ ಪುನೀತಕುಲ.

---

### ೫೬ ಸುಂದರ ಋಷಿಃ

ಅಂಗಿರಸಸೌಂದಯೇ‌ರ್ೕತಿ ದ್ವ್ಯಾರ್ಷೇಯ ಪ್ರವರಾನ್ವಿತ ಸುಂದರಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ ( ) ಗುಪ್ತೋಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ಇನ ೨ ಇನಕುಲ ೩ ಇನಕೋಲ ೪ ವಿನುಕುಲ.

ಸಮಾನಗೋತ್ರ:—೧ ವಿನುದನ್ಯಃ ೨ ಸುಂದರಃ.

---

### ೫೭ ಸುವರ್ಣ ಋಷಿಃ

ಭಾರ್ಗವಸೌವರ್ಣೇತಿ ದ್ವ್ಯಾರ್ಷೇಯ ಪ್ರವರಾನ್ವಿತ ಸುವರ್ಣಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ ( ) ಗುಪ್ತೋಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ಪ್ರೋಢಯಾಚಕುಲ ೨ ಪ್ರೋಢಯಾಜಕುಲ ೩ ಪ್ರೌಢಯಾಜ.

ಸಮಾನಗೋತ್ರ:—೧ ಪಾರ್ಥಿನಃ ೨ ಪೌಸಲಃ ೩ ಸೌವಣಃ

---

### ೫೮ ಸುಬ್ರಹ್ಮಣ್ಯ ಋಷಿಃ

ಭಾರ್ಗವಸೌಬ್ರಹ್ಮಣ್ಯೇತಿ ದ್ವ್ಯಾರ್ಷೇಯಪ್ರವರಾನ್ವಿತ ಸುಬ್ರಹ್ಮಣ್ಯಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ ( ) ಗುಪ್ತೋಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ಚಂದನಕುಲ ೨ ಸ್ನಿಗ್ಧಕುಲ.

## ೫೯ ಸೌಪರ್ಣ ಋಷಿಃ

ಭಾರ್ಗವಸೌಪರ್ಣೇತಿ ದ್ವ್ಯಾರ್ಷೇಯಪ್ರವರಾನ್ವಿತ ಸೌಪರ್ಣ ಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ (     ) ಗುಪ್ತೋಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ಬುಧುರುಕುಲ ೨ ಬುಧುರುಕ್ಸಕುಲ.

ಸಮಾನಗೋತ್ರ.—೧ ಬೋಧಾಯನಃ ೨ ಸೌಪರ್ಣಃ.

---

## ೬೦ ಸೌಮ್ಯ ಋಷಿಃ

ಭಾರ್ಗವಸೌಮ್ಯೇತಿ ದ್ವ್ಯಾರ್ಷೇಯ ಪ್ರವರಾನ್ವಿತ ಸೌಮ್ಯ ಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ (     ) ಗುಪ್ತೋಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ಹಸ್ತಿಕುಲ.

---

## ೬೧ ಸೌವರ್ಣ ಋಷಿಃ

ಆಂಗಿರಸಸೌವರ್ಣೇತಿ ದ್ವ್ಯಾರ್ಷೇಯ ಪ್ರವರಾನ್ವಿತ ಸೌವರ್ಣ ಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ (     ) ಗುಪ್ತೋಹಂಭೋಅಭಿವಾದಯೇ.

### ಸಂಕೇತನಾಮಗಳು

೧ ಸುಶಾಲಕುಲ ೨ ಸಕಾಳ್ಲಕುಲ ೩ ಸುಸೋಳ್ಲಕುಲ
೪ ಸೂಸಾಲಕುಲ.

ಸಮಾನಗೋತ್ರ:—೧ ಅಂಗಿರಸಃ ೨ ಶ್ರೀಕಂಠಃ ೩ ಸೌವರ್ಣಃ.

## ೬೨ ಹರಿವಲ್ಕ್ಯ ಋಷಿಃ

ಭಾರ್ಗವಹರಿವಲ್ಕ್ಯೇತಿ ದ್ವ್ಯಾರ್ಷೇಯ ಪ್ರವರಾನ್ವಿತ ಹರಿವಲ್ಕ್ಯಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ ( ) ಗುಪ್ತೋಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ಕಪಟ ೨ ಕುರಟ ೩ ಕೊರಟಿಕುಲ ೪ ಗೊರಂಟಿಕುಲ.

ಸಮಾನಗೋತ್ರ:—೧ ಮತಂಗಃ ೨ ಹಾರಿವಲ್ಕ್ಯಃ.

## ೬೩ ಚಾಮರ್ಷಣ ಋಷಿಃ

ಭಾರ್ಗವಚಾಮರ್ಷಣೇತಿ ದ್ವ್ಯಾರ್ಷೇಯಪ್ರವರಾನ್ವಿತ ಚಾಮರ್ಷಣಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ ( ) ಗುಪ್ತೋಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ಪೆದ್ದಿಶ್ರೇಷ್ಠ ೨ ಪೆದ್ದಿಶಿಷ್ಠ ೩ ಬುಧಶಿಷ್ಟಕುಲ ೪ ಬದ್ಧಶಿಷ್ಟಕುಲ.

ಸಮಾನಗೋತ್ರ.—೧ ಚಾಮರ್ಷಣಃ ೨ ಪ್ರೀತಮನಸ್ಕಃ ೩ ಬುಮರುಃ.



# ತ್ರ್ಯಾರ್ಷೇಯ ಗೋತ್ರಗಳು

## ೧ ಅಗಸ್ತ್ಯ ಋಷಿಃ

ಆಗಸ್ತ್ಯಮಾಹೇಂದ್ರಮಾಯೋಭವೇತಿ ತ್ರ್ಯಾರ್ಷೇಯ ಪ್ರವರಾನ್ವಿತ ಅಗಸ್ತ್ಯಸಗೋತ್ರಃ ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ (        ) ಗುಪ್ತೋಹಂಭೋ ಅಭಿವಾದಯೇ.

**ಸಂಕೇತನಾಮಗಳು**

೧ ಅನಪಕುಲ ೨ ಅನಪಾನಕುಲ ೩ ಅನುಪಕುಲ ೪ ಅನುಪಾಲ.

## ೨ ಅತ್ರೇಯ ಋಷಿಃ

ಆತ್ರೇಯ ಆರ್ಚನಾನಸಶ್ಯಾವಾಶ್ವೇತಿ ತ್ರ್ಯಾರ್ಷೇಯ ಪ್ರವರಾನ್ವಿತ ಆತ್ರೇಯಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ (        ) ಗುಪ್ತೋಹಂಭೋ ಅಭಿವಾದಯೇ.

**ಸಂಕೇತನಾಮಗಳು**

೧ ಅರಿಶಿಷ್ಟಕುಲ ೨ ಅರಿಶೆಟ್ಲಕುಲ ೩ ಯರಶಿಷ್ಟಕುಲ
೪ ಅರಸಕುಲ ೫ ಎಲಿಶಿಷ್ಟಕುಲ ೬ ಹರಿಶಿಷ್ಟಕುಲ.

## ೩ ಆಚ್ಛಾಯನ ಋಷಿಃ

ಆಂಗೀರಸಆಶ್ವಲಾಯನ ಆಚ್ಛಾಯನೇತಿ ತ್ರ್ಯಾರ್ಷೇಯ ಪ್ರವ

ರಾನ್ವಿತ ಆಚ್ಛಾಯನಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿೀ ( ) ಗುಪ್ತೋಹಂಭೋ ಅಭಿವಾದಯೇ.

**ಸಂಕೇತನಾಮಗಳು**

೧ ಅಗ್ರಮೂಲಕುಲ ೨ ಅರ್ಘ್ಯಮೂಲ ೩ ಅರ್ಘ್ಯಮೂಲಕುಲ ೪ ಅಮಲಕುಲ.

ಸಮಾನಗೋತ್ರ:—೧ ಆಚ್ಛಾಯನ ೨ ಆಶ್ವಲಾಯನ.

---

## ೪ ಉಗ್ರಸೇನ ಋಷಿಃ

ಭಾರ್ಗವ ಔಗ್ರಸೇನ ಔರ್ವಸೇನೇತಿ ತ್ರ್ಯಾರ್ಷೇಯ ಪ್ರವರಾನ್ವಿತ ಉಗ್ರಸೇನಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿೀ ( ) ಗುಪ್ತೋಹಂಭೋ ಅಭಿವಾದಯೇ.

**ಸಂಕೇತನಾಮಗಳು**

೧ ಕುಮಾರಶಿಷ್ಠ ೨ ಕುಮಿರಿಶಿಷ್ಠ ೩ ಕೊಮರಶಿಷ್ಠಕುಲ.

ಸಮಾನಗೋತ್ರ:—೧ ಔಗ್ರಸೇನ ೨ ಔರ್ವಸೇನ.

---

## ೫ ಉತ್ತಮೋಜಸ ಋಷಿಃ

ಅಂಗಿರಸನಾರದ ಔತ್ತಮೋಜಸೇತಿ ತ್ರ್ಯಾರ್ಷೇಯ ಪ್ರವರಾನ್ವಿತ ಉತ್ತಮೋಜಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿೀ ( ) ಗುಪ್ತೋಹಂಭೋ ಅಭಿವಾದಯೇ.

**ಸಂಕೇತನಾಮಗಳು**

೧ ಉತಶಾಲಕುಲ ೨ ಉತಕುಲ ೩ ಉತಶಿಷ್ಠಕುಲ ೪ ಉತ್ತಮಕುಲ.

---

## ೬ ಕಣ್ವ ಋಷಿಃ

ಅಂಗಿರಸಅಜಾಮಿಾಢ ಕಾಣ್ವೇತಿ ತ್ರ್ಯಾರ್ಷೇಯಪ್ರವರಾನ್ವಿತ ಕಣ್ವಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿಾ (    ) ಗುಪ್ತೋಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ಕರ್ಣಕುಲ  ೪ ಕಾಟಕುಲ

೨ ಕರ್ಣಾಕುಲ  ೫ ಕಾಟುಕುಲ

೩ ಕರ್ಣಾಟಕುಲ  ೬ ಕೋಟಕುಲ

೭ ಕಾಟುಕುಲ.

## ೭ ಕಂದರ್ಪ ಋಷಿಃ

ಅಂಗಿರಸಕಾಂಚನಕಾಂದರ್ಪೇತಿ ತ್ರ್ಯಾರ್ಷೇಯ ಪ್ರವರಾನ್ವಿತ ಕಂದರ್ಪಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿಾ (    ) ಗುಪ್ತೋಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ಚರಕುಲ  ೨ ಚೇಗೊಡ್ಡಕುಲ  ೩ ಚೇಗೊಳ್ಳಕುಲ

೪ ಮನಕುಲ  ೫ ಶ್ರೀಪ್ರಕುಂಡಲಕುಲ.

## ೮ ಕಪೀತ ಋಷಿಃ

ಅಂಗಿರಾದಮುಬಾಹ್ಯೌರುಕ್ಷಯೇತಿ ತ್ರ್ಯಾರ್ಷೇಯ ಪ್ರವರಾನ್ವಿತ ಕಪೀತಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿಾ (    ) ಗುಪ್ತೋಹಂಭೋ ಅಭಿವಾದಯೇ.

**ಸಂಕೇತನಾಮ**

೧ ವೆಂಕಾಲಕುಲ.

ಸಮಾನಗೋತ್ರ:—೧ ಕಾಪೀತರಃ ೨ ಶಕ್ತಿಃ ೩ ವೇದನಿಧಿಃ.

## ೯ ಕಶ್ಯಪ ಋಷಿಃ

ಕಾಶ್ಯಪ ಆವತ್ಸಾರ ಆಸಿತೇತಿ ತ್ರ್ಯಾರ್ಷೇಯ ಪ್ರವರಾನ್ವಿತ ಕಾಶ್ಯಪಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ ( ) ಗುಪ್ತೋಹಂಭೋ ಅಭಿವಾದಯೇ.

**ಸಂಕೇತನಾಮಗಳು**

೧ ಗಣಮುಖಕುಲ ೨ ಗಣಮುಖಿಕುಲ ೩ ಗಣಮುಖುಕುಲ.

## ೧೦ ಕುತ್ಸಋಷಿಃ

ಅಂಗಿರಸಮಾಂಧಾತಕೌತ್ಸೇತಿ ತ್ರ್ಯಾರ್ಷೇಯ ಪ್ರವರಾನ್ವಿತ ಕುತ್ಸಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ ( ) ಗುಪ್ತೋಹಂಭೋ ಅಭಿವಾದಯೇ.

**ಸಂಕೇತನಾಮ**

ಇಕ್ಷ್ವಾಕುಕುಲ.

ಸಮಾನಗೋತ್ರ:—೧ ಕೌತ್ಸಃ ೨ ಮಹಾತೇಜಸ್ಸಃ.

## ೧೧ ಗಾರ್ಗ್ಯಋಷಿಃ

ಆಂಗಿರಸಸೈನ್ಯಗಾರ್ಗ್ಯೇತಿ ತ್ರ್ಯಾರ್ಷೇಯ ಪ್ರವರಾನ್ವಿತ

ಗಾರ್ಗ್ಯಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿಾ ( ) ಗುಪ್ತೋಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ಪ್ರಹಿಣಕುಲ　೨ ಪ್ರಹೀಣಕುಲ　೩ ಪೈಡಿಕುಲ.

ಸಮಾನಗೋತ್ರ:—೧ ಗಾರ್ಗ್ಯಃ　೨ ಅಂಗಿರಸಃ.

---

## ೧೭ ಗೃತ್ಸ್ನಮದ ಋಷಿಃ

ಭಾರ್ಗವಶೌನಹೋತ್ರ ಗಾರ್ತ್ಸ್ನಮದೇತಿ ತ್ರ್ಯಾರ್ಷೇಯ ಪ್ರವರಾನ್ವಿತ ಗೃತ್ಸ್ನಮದಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿಾ ( ) ಗುಪ್ತೋಹಂಭೋ ಅಭಿವಾದಯೇ.

### ಸಂಕೇತನಾಮಗಳು

| | |
|---|---|
| ೧ ಇಸವಕುಲ | ೪ ಚನ್ನಕುಲ |
| ೨ ಇಸುವಕುಲ | ೫ ಜನಕುಲ |
| ೩ ಇಷುಪಕುಲ | ೬ ಜಾನುಕುಲ. |

ಸಮಾನಗೋತ್ರ:—೧ ಗಾರ್ತ್ಸ್ನಮದಃ　೨ ಕೃತ್ಸ್ನಃ　೩ ವಿಷ್ಣುವೃದ್ಧಃ.

---

## ೧೮ ಗೋಪಕ ಋಷಿಃ

ಆಂಗಿರಸಘೋಂಟಕ ಗೌಪಕೇತಿತ್ರ್ಯಾರ್ಷೇಯ ಪ್ರವರಾನ್ವಿತ ಗೋಪಕಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿಾ ( ) ಗುಪ್ತೋಹಂಭೋ ಅಭಿವಾದಯೇ.

**ಸಂಕೇತನಾಮ**

೧ ಇಂಚುಪಕುಲ ೨ ಇಂಚುಪಾಹ್ವಯ ೩ ಗೋಪಕುಲ
೪ ಗೋಂಟಕುಲ ೫ ಘೋಂಟಕಕುಲ.

---

**೧೪ ಗೌತಮ ಋಷಿಃ**

ಅಂಗಿರಸ ಆಯಾಸ್ಯಗೌತಮೇತಿ ತ್ರ್ಯಾರ್ಷೇಯ ಪ್ರವರಾನ್ವಿತ ಗೌತಮಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿ ( ) ಗುಪ್ತೋಹಂಭೋ ಅಭಿವಾದಯೇ.

**ಸಂಕೇತನಾಮಗಳು**

೧ ಗಂಧಿಶೀಲ ೩ ಗಂಧಸೀಲ
೨ ಗಂಧಶೀಲಕುಲ ೪ ಗ್ರಂಥಿಶೀಲ.

---

**೧೫ ಜತುಕರ್ಣ ಋಷಿಃ**

ಅಂಗಿರಸ ಚಾಂದ್ರಶಿಷ್ಠಜಾತುಕರ್ಣೇತಿ ತ್ರ್ಯಾರ್ಷೇಯ ಪ್ರವರಾನ್ವಿತ ಜತುಕರ್ಣಸಗೋತ್ರಃ ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿ ( ) ಗುಪ್ತೋಹಂಭೋ ಅಭಿವಾದಯೇ.

**ಸಂಕೇತನಾಮಗಳು**

೧ ಚಂದ್ರಕುಲ ೩ ಚಂದ್ರಮೂಲ
೨ ಚದ್ರಮಶಿಷ್ಠ ೪ ಚಂದ್ರಶಿಷ್ಠ.

---

**೧೬ ಜರತ್ಕಾರ ಋಷಿಃ**

ಅಂಗಿರಸ ಜಾಹ್ನವಜಾರತ್ಕಾರೇತಿ ತ್ರ್ಯಾರ್ಷೇಯಪ್ರವರಾನ್ವಿತ

ಜರತ್ಕಾರಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ ( ) ಗುಪ್ತೋಽಹಂಭೋ ಅಭಿವಾದಯೇ.

**ಸಂಕೇತನಾಮಗಳು**

೧ ಭನ್ನಕುಲ ೨ ಜನಕುಲ ೩ ಜಾನುಕುಲ.

ಸಮಾನಗೋತ್ರ:—೧ ಜರತ್ಕಾರಃ ೨ ಜಹ್ನುಃ.

---

## ೧೭ ತಿತ್ತಿರಿ ಋುಷಿಃ

ಅಂಗಿರಸಕವಿಭೂತಿ ತ್ರೈತ್ತಿರೀಯೇತಿ ತ್ರ್ಯಾರ್ಷೇಯಪ್ರವರಾನ್ವಿತ ತಿತ್ತಿರಿಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ ( ) ಗುಪ್ತೋಽಹಂಭೋ ಅಭಿವಾದಯೇ.

**ಸಂಕೇತನಾಮಗಳು**

೧ ಭಮುದಕುಲ ೩ ಭ್ರಮರಕುಲ

೨ ಭ್ರಮುದಕುಲ ೪ ಭ್ರವದಕುಲ.

ಸಮಾನಗೋತ್ರ:—೧ ತಿತ್ತಿರಿಃ ೨ ಗಾರ್ಗ್ಯಃ.

---

## ೧೮ ದಾಲ್ಭ್ಯ ಋುಷಿಃ

ಅಂಗಿರಸ ಪಾಲಕದಾಲ್ಭ್ಯೇತಿ ತ್ರ್ಯಾರ್ಷೇಯ ಪ್ರವರಾನ್ವಿತ ದಾಲ್ಭ್ಯಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ ( ) ಗುಪ್ತೋಽಹಂಭೋ ಅಭಿವಾದಯೇ.

**ಸಂಕೇತನಾಮಗಳು**

೧ ಪಟನಶಿಷ್ಠಕುಲ ೨ ಪಟನಮುಶಿಷ್ಠಕುಲ ೩ ಪಟನಕುಲ

೪ ಪಲಕಕುಲ ೫ ಪಲಕಲಕುಲ.

---

## ೧೯ ದೇವವಲ್ಕ್ಯ ಋಷಿಃ

ಭಾರ್ಗವಹರಿವಕ್ತ್ರದೈವವಲ್ಕೇತಿ ತ್ರ್ಯಾರ್ಷೇಯಪ್ರವರಾನ್ವಿತ ದೇವವಲ್ಕ್ಯಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ ( ) ಗುಪ್ತೋಹಂಭೋ ಅಭಿವಾದಯೇ.

**ಸಂಕೇತನಾಮಗಳು**

೧ ಉಸಿರಕುಲ ೨ ಉಸಿರಿಕುಲ ೩ ದೇಶಿಷ್ಟಕುಲ.

---

## ೨೦ ಪರಸ್ಪರಾಯಣ ಋಷಿಃ

ಅಂಗಿರಸಸಂಕೃತಿ ಗೌರವೇತಿ ತ್ರ್ಯಾರ್ಷೇಯಪ್ರವರಾನ್ವಿತ ಪರಸ್ಪರಾಯಣ್ಯಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ ( ) ಗುಪ್ತೋಹಂಭೋ ಅಭಿವಾದಯೇ.

**ಸಂಕೇತನಾಮಗಳು**

೧ ತುಪ್ವಿಶಿಷ್ಟಕುಲ ೨ ಪೌಲಸ್ತ್ಯಕುಲ ೩ ಶ್ರೀಪುಂಶಿಕಕುಲ.

ಸಮಾನಗೋತ್ರ:—೧ ಪಾರಸ್ಪರಾಯಣ್ಯಃ ೨ ಗಾಲವಃ ೩ ಪುಲಸ್ತ್ಯಃ.

---

## ೨೧ ಪಲ್ಲವ ಋಷಿಃ

ಅಂಗಿರಸ ಘಾಂಟಾಸ್ಥೂಲ ಪಾಲ್ಲವೇತಿ ತ್ರ್ಯಾರ್ಷೇಯ ಪ್ರವರಾನ್ವಿತ ಪಲ್ಲವಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ ( ) ಗುಪ್ತೋಹಂಭೋ ಅಭಿವಾದಯೇ.

**ಸಂಕೇತನಾಮಗಳು**

೧ ಗಣಪಕುಲ ೨ ಘಂಟಕುಲ

೩ ಘಂಟಾಶುಲಕುಲ　　೪ ಘಂಟಸುಕುಲ
೫ ಘಂಟಸೂಢ್ಲಕುಲ.

---

## ೨೨ ಪಿಂಗಳ ಋಷಿಃ

ಅಂಗಿರಸ ಅಂಬರೀಷ ಯುವ್ವನಾಶ್ವೇತಿ ತ್ರ್ಯಾರ್ಷೇಯಪ್ರವರಾನ್ವಿತ ಪಿಂಗಳಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿಾ (　　) ಗುಪ್ತೋಽಹಂಭೋಃ ಅಭಿವಾದಯೇ.

### ಸಂಕೇತನಾಮ

ಆಯನಕುಲ.

---

## ೨೩ ಪೂತಿಮಾಷ ಋಷಿಃ

ಅಂಗಿರಸ ಗೌರವೀತ ಸಾಂಕೃತ್ಯೇತಿ ತ್ರ್ಯಾರ್ಷೇಯ ಪ್ರವರಾನ್ವಿತ ಪೂತಿಮಾಷಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿಾ (　　) ಗುಪ್ತೋಽಹಂಭೋಃ ಅಭಿವಾದಯೇ.

### ಸಂಕೇತನಾಮಗಳು

೧ ತುರ್ಯಾಟಕುಲ　　೪ ತುಲಶಿಷ್ಟಕುಲ
೨ ತುಲಾಶಿಷ್ಟಕುಲ　　೫ ತುಲಸಿಕುಲ
೩ ತುರ್ರ್ಯಾಟಕುಲ　　೬ ತೋಟಕುಲ
೭ ತೋಟಕುಲ.

ಸಮಾನಗೋತ್ರ:—೧ ಪೂತಿಮಾಷ　೨ ಸಂಕೃತಿಃ.

---

## ೨೪ ಪೌಂಡ್ರಕ ಋುಷಿಃ

ಅಂಗಿರಸಪೌಲ್ಲೀಖ ಪೌಂಡ್ರಕೇತಿ ತ್ರ್ಯಾರ್ಷೇಯ ಪ್ರವರಾನ್ವಿತ ಪೌಂಡ್ರಕಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ ( ) ಗುಪ್ತೋಹಂಭೋಅಭಿವಾದಯೇ.

### ಸಂಕೇತನಾಮಗಳು

೧ ಪುಂಸಿವಮಾಂಶುಕುಲ ೨ ಪುಂಸಿವಮಾಸಕುಲ ೩ ಪೌಶಿಷ್ಟಕುಲ ೪ ಪ್ರೋಲಿಕುಲ ೫ ಪ್ರೋಲೀಖಕುಲ.

## ೨೫ ಪ್ರಾಭಾತ ಋುಷಿಃ

ಅಂಗಿರಸ ರಾವಿಶಿಷ್ಟಪ್ರಾಭಾತೇತಿ ತ್ರ್ಯಾರ್ಷೇಯ ಪ್ರವರಾನ್ವಿತ ಪ್ರಾಭಾತಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ ( ) ಗುಪ್ತೋಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ಉದ್ವಾಹಕುಲ
೨ ಪೆಳ್ಲಿಕುಲ
೩ ಪೆಂಡ್ಲಿಕುಲ
೪ ರವಿಶಿಷ್ಟಕುಲ.

## ೨೬ ಭಾರದ್ವಾಜ ಋುಷಿಃ

ಆಂಗಿರಸಬಾರ್ಹಸ್ಪತ್ಯಭಾರದ್ವಾಜೇತಿ ತ್ರ್ಯಾರ್ಷೇಯಪ್ರವರಾನ್ವಿತ ಭಾರದ್ವಾಜಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ ( ) ಗುಪ್ತೋಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ಬಲಶಿಷ್ಟ ೨ ಬಲಶ್ರೇಷ್ಠ ೩ ಬಲಿಶಿಷ್ಠ.

## ೨೭ ಮೈತ್ರೇಯು ಋಷಿಃ

ಭಾರ್ಗವ ದೈವೋದಾಸ ವಾರ್ಧ್ಯಶ್ವೇತಿ ತ್ರ್ಯಾರ್ಷೇಯ ಪ್ರವರಾನ್ವಿತ ಮೈತ್ರೇಯುಸಗೋತ್ರಃ, ಆಪಸ್ತಂಭಸೂತ್ರಃ, ಯುಜುಶ್ಶಾಖಾಧ್ಯಾಯೀ (　　) ಗುಪ್ತೋಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ಮದ್ದಿಕುಲ　೨ ಮದನಕುಲ　೩ ಮಧ್ಯಸಕುಲ
೪ ಮಿಥುನಕುಲ　೫ ಮೈತ್ರಿಕುಲ.

ಸಮಾನಗೋತ್ರ:—೧ ಮಿತ್ರಿಯುಃ　೨ ಮೈತ್ರೇಯುಃ.

---

## ೨೮ ಮೌಸಲ ಋಷಿಃ

ಭಾರ್ಗವಜಾಂಭಸೂದನ ಮೌಸಲೇತಿ ತ್ರ್ಯಾರ್ಷೇಯ ಪ್ರವರಾನ್ವಿತ ಮೌಸಲಸಗೋತ್ರಃ, ಆಪಸ್ತಂಭಸೂತ್ರಃ, ಯುಜುಶ್ಶಾಖಾಧ್ಯಾಯೀ (　　) ಗುಪ್ತೋಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ಚಂದ　೨ ಚಂದಕುಲ　೩ ಚಂದಕಕುಲ　೪ ಚಂಗಾಲಕುಲ.

ಸಮಾನಗೋತ್ರ:—೧ ಜಂಭಸೂದನಃ　೨ ಧೌಮ್ಯಃ　೩ ಮೌಸಲಃ.

---

## ೨೯ ಮೌದ್ಗಲ್ಯ ಋಷಿಃ

ಅಂಗಿರಸಭಾರ್ಮ್ಯಶ್ವ ಮೌದ್ಗಲ್ಯೇತಿ ತ್ರ್ಯಾರ್ಷೇಯ ಪ್ರವರಾನ್ವಿತ ಮೌದ್ಗಲ್ಯಸಗೋತ್ರಃ, ಆಪಸ್ತಂಭಸೂತ್ರಃ, ಯುಜುಶ್ಶಾಖಾಧ್ಯಾಯೀ (　　) ಗುಪ್ತೋಹಂಭೋ ಅಭಿವಾದಯೇ.

## ಸಂಕೇತನಾಮಗಳು

೧ ನಾಭಿಳ್ಳಕುಲ ೨ ನಾಭೀಲಕುಲ ೩ ನಾಭೀಲಸಕುಲ
೪ ಮುನಿಕುಲ ೫ ಮೂಲಕುಲ.

---

## ೩೦ ಯಸ್ಕ ಋಷಿಃ

ಭಾರ್ಗವ ವೈತಹವ್ಯಸಾವೇತಸೇತಿ ತ್ರ್ಯಾರ್ಷೇಯ ಪ್ರವರಾನ್ವಿತ ಯಾಸ್ಕಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿಾ (      ) ಗುಪ್ತೋಹಂಭೋ ಅಭಿವಾದಯೇ.

## ಸಂಕೇತನಾಮಗಳು

೧ ವ್ಯಾಳಕೂಲಸ ೨ ವೆಲಿಗೋಳ್ಲ ೩ ವೇಲಿಗೊಳ್ಲ.

ಸಮಾನಗೋತ್ರ:—೧ ಯಾಸ್ಕಃ ೨ ಜೈಮಿನಿಃ ೩ ವಾಧೂಲಸಃ
೪ ವೀತಹವ್ಯಃ.

---

## ೩೧ ವಟುಕ ಋಷಿಃ

ಅಂಗಿರಸ ವಾಟುಕಸ್ಥಾಲಶಿರಸ್ಕೇತಿ ತ್ರ್ಯಾರ್ಷೇಯ ಪ್ರವರಾನ್ವಿತ ವಟುಕಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿಾ (      ) ಗುಪ್ತೋಹಂಭೋ ಅಭಿವಾದಯೇ.

## ಸಂಕೇತನಾಮ

ಅಭಿಮಂಚಿಕುಲ.

ಸಮಾನಗೋತ್ರ:—೧ ವಾಟುಕಃ ೨ ಸ್ಥೂಲಶಿರಸ್ಕಃ.

---

## ೩೨ ವಸಿಷ್ಠ ಋಷಿಃ

ವಾಸಿಷ್ಠಐಂದ್ರಪ್ರಮದ ಆಭರದ್ವಸವ್ಯೇತಿ ತ್ರ್ಯಾರ್ಷೇಯ ಪ್ರವರಾನ್ವಿತ ವಸಿಷ್ಠಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿೀ (　　) ಗುಪ್ತೋಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ವಸ್ತ್ರ　　೩ ವಸ್ತ್ರಕುಲ

೨ ವಸ್ತ್ರಸ　　೪ ವಸ್ತ್ರಕುಲ.

---

## ೩೩ ವಾಮದೇವ ಋಷಿಃ

ಆಂಗಿರಸ ಬೃಹದುಕ್ಥ ವಾಮದೇವೇತಿ ತ್ರ್ಯಾರ್ಷೇಯ ಪ್ರವರಾನ್ವಿತ ವಾಮದೇವಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿೀ (　　) ಗುಪ್ತೋಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ಉಪಲಾಲಕುಲ　　೩ ಉಪನಕುಲ

೨ ಉಪಮಕುಲ　　೪ ಉಪಮನ್ಯಕುಲ.

---

## ೩೪ ವಿಶ್ವಾಮಿತ್ರ ಋಷಿಃ

ವೈಶ್ವಾಮಿತ್ರಮಾಧುಶ್ಛಂದಸ ಆಘಮರ್ಷಣೇತಿ ತ್ರ್ಯಾರ್ಷೇಯ ಪ್ರವರಾನ್ವಿತ ವಿಶ್ವಾಮಿತ್ರಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿೀ (　　) ಗುಪ್ತೋಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ವಿಕ್ರಮಶಿಷ್ಠ　　೨ ವಿಕ್ರಮಶಿಷ್ಠಕುಲ.

---

### ೩೫ ವಿಷ್ಣುವೃದ್ಧ ಋಷಿಃ

ಆಂಗಿರಸಪೌರುಕುತ್ಸ ತ್ರಾಸದಶ್ಯವೇತಿ ತ್ರ್ಯಾರ್ಷೇಯ ಪ್ರವರಾನ್ವಿತ ವಿಷ್ಣುವೃದ್ಧಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿೀ ( ) ಗುಪ್ತೋಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ಪಿಪ್ಪಲಕುಲ ೨ ಪುಷ್ಪಾಲಕುಲ.

---

### ೩೬ ಶ್ರೀವತ್ಸ ಋಷಿಃ

ಭಾರ್ಗವಚ್ಯಾವನ ಆಪ್ನುವಾನೇತಿ ತ್ರ್ಯಾರ್ಷೇಯ ಪ್ರವರಾನ್ವಿತ ಶ್ರೀವತ್ಸಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿೀ ( ) ಗುಪ್ತೋಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ಚಿಂಕುಲ ೨ ಶ್ರೀರಂಗಕುಲ ೩ ಶ್ರೀಲಕುಲ.

---

### ೩೭ ಸತ್ಯಋಷಿಃ

ಆಂಗಿರಸ ಸಾತ್ಯವ್ರತ ಸಾತ್ಯೇತಿ ತ್ರ್ಯಾರ್ಷೇಯ ಪ್ರವರಾನ್ವಿತ ಸತ್ಯಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯಿೀ ( ) ಗುಪ್ತೋಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ಅಂದಿರಕುಲ ೨ ಚಿಂತಕುಲ ೩ ಚಿಂತಮರಿಸ್ಟ್
೪ ಚಿಂತ್ಯಕುಲ ೫ ಚಿಂತಾಲ.

ಸಮಾನಗೋತ್ರ:—೧ ಸತ್ಯವ್ರತಃ  ೨ ಸಾತ್ಯಃ.

---

## ೩೮ ಸುತೀಕ್ಷ್ಣ ಋಷಿಃ

ಅಂಗಿರಸ ದ್ಯಾಂತಸೌತೀಕ್ಷ್ಣೇತಿ ತ್ರ್ಯಾರ್ಷೇಯ ಪ್ರವರಾನ್ವಿತ ಸುತೀಕ್ಷ್ಣಸಗೋತ್ರಃ, ಆಪಸ್ತಂಭಸೂತ್ರಃ, ಯಜುಶ್ಶಾಖಾಧ್ಯಾಯೀ (      ) ಗುಪ್ತೋಹಂಭೋ ಅಭಿವಾದಯೇ.

### ಸಂಕೇತನಾಮಗಳು

೧ ದಂತಕುಲ
೨ ದ್ಯಂತಕುಲ
೩ ದ್ವಂತಕುಲ
೪ ದೆಂತಕುಲ
೫ ದೇವಿಶೆಟ್ಲ
೬ ದೊಂತಕುಲ.



# ಪಂಚಾರ್ಷೇಯ ಗೋತ್ರ

---

## ಪಾರಾಶರ್ಯ ಋಷಿಃ

ಆಂಗಿರಸ ಪ್ರೌಢಶೀಲ ಪ್ರಾಗ್ಬಾಲ ಕಾಮಧೇನು ಪಾರಾಶರ್ಯೇತಿ ಪಂಚಾರ್ಷೇಯ ಪ್ರವರಾನ್ವಿತ ಪಾರಾಶರ್ಯಸಗೋತ್ರಃ, ಆಪಸ್ತಂಭ ಸೂತ್ರಃ, ಯಜುಶ್ಶಾಖಾಧ್ಯಾಯೀ (          ) ಗುಪ್ತೋಹಂಭೋ ಅಭಿವಾದಯೇ.

## ಸಂಕೇತನಾಮಗಳು

೧ ಕಾಮಧೇನುಕುಲ
೨ ಪಡಗಶಿಲಕುಲ
೩ ಪಾಂಬಾಳಕುಲ
೪ ಪಾಂಚಾಲಕುಲ
೫ ಪ್ರಾಣಸುಲ
೬ ಪ್ರಾಣಸುಲಕುಲ
೭ ಪ್ರಾಣಶೀಲಕುಲ
೮ ಪ್ರಾಣಸೀಲಕುಲ
೯ ಪ್ರಾಗ್ಬಾಲಕುಲ
೧೦ ಪೌಢ್ರಶೀಲಕುಲ
೧೧ ಪಾಪಾಲ
೧೨ ಪಾಂಚಾಲ

---

ವೈಶ್ಯರಲ್ಲಿ ಕೆಲವರು ಗೋತ್ರವನ್ನು ಪ್ರಶ್ನೆಮಾಡಿದಾಗ ಸಂಕೇತನಾಮವನ್ನು ಹೇಳುವ ಪರಿಪಾಠವಿದೆ. ಸಂಕೇತನಾಮವೆಂಬುವದು ತತ್ಕಾಲದಲ್ಲಿ ತಮ್ಮ ವಂಶಪಾರಿಶುಧ್ಯರಕ್ಷಣೆಗಾಗಿ ಕಲ್ಪಿಸಿಕೊಂಡ ಗುರುತು ಮಾತ್ರ. ಅದೆಂದಿಗೂ ಗೋತ್ರದ ಹೆಸರಲ್ಲ. ಗೋತ್ರದ ಹೆಸರನ್ನು ಹೇಳದೆ ಸಂಕೇತನಾಮವನ್ನೇ ಹೇಳುವದರಿಂದ ವೈಶ್ಯರು ಶಾಸ್ತ್ರೋಕ್ತ ಗೋತ್ರಪ್ರವರರಹಿತರೆಂಬ ಅಪವಾದ ಬರಲು ಅವಕಾಶವಾಗುತ್ತದೆ. ಸಂಕೇತನಾಮವನ್ನಾಗಲಿ ಅಡ್ಡಹೆಸರು (ಇಂಟಿ ಪೇರು) ಎಂಬ ಹೆಸರಿನ ಗುರುತನ್ನಾಗಲಿ ಮರೆಯುವದರಿಂದ ಬಾಧಕವೇನಿಲ್ಲ. ಆಂಧ್ರದೇಶೀಯ ವೈಶ್ಯರಲ್ಲಿ ಅಡ್ಡಹೆಸರಿನ ರೂಢಿಯಿದ್ದಷ್ಟು ಕರ್ನಾಟಕ ದೇಶೀಯರಲ್ಲಿ ಕಂಡುಬರುವದಿಲ್ಲ. ಗೋತ್ರ ಪ್ರವರಗಳ ವಿವರವನ್ನು ಕುಲಪುರೋಹಿತನಿಂದಲೇ ತಿಳಿಯಬೇಕೆಂಬ ಪರಾಧೀನತೆಯು ವೈಶ್ಯರಿಗೆ ಅದೆಂದಿಗೂ ಉಚಿತವಲ್ಲ. ಈ ಕಾಲದಲ್ಲಿ ಎಲ್ಲವನ್ನೂ ತಿಳಿದಿರುವ ಪುರೋಹಿತರು ದೊರೆಯುವದು ದುರ್ಲಭವಾಗುತ್ತಲಿದೆ. ಕಲಿ ಪ್ರಭಾವದಿಂದ ದ್ವಿಜರು (ಬ್ರಾಹ್ಮಣ ಕ್ಷತ್ರಿಯ ವೈಶ್ಯರು) ಜೀವನ ಸಂಗ್ರಾಮಕ್ಕೆ ಸಿಲುಕಿ ಇರಬೇಕಾದ ನಿಯಮದಂತೆ ಇರಲು ಸಾಧ್ಯವಾಗುತ್ತಿಲ್ಲ. ಸ್ಮೃತಿಕಾರರೂ ಪುರಾಣ ಕರ್ತರೂ ಕೃತಯುಗವನ್ನು ಬ್ರಾಹ್ಮಣ ಯುಗವೆಂತಲೂ, ತ್ರೇತಾಯುಗವನ್ನು ಕ್ಷತ್ರಿಯ ಯುಗವೆಂತಲೂ, ದ್ವಾಪರಯುಗವನ್ನು ವೈಶ್ಯ ಯುಗವೆಂತಲೂ, ಕಲಿಯುಗವನ್ನು ಶೂದ್ರಯುಗವೆಂತಲೂ, (Labour age) ಸಾವಿರಾರುವರ್ಷಗಳ ಹಿಂದೆಯೇ ತಮ್ಮ ಪ್ರತಿಭಾ ವಿಶೇಷದಿಂದ ತಿಳಿದು ಬರೆದಿರುತ್ತಾರೆ ಆದುದರಿಂದ ಕಲಿಯುಗದಲ್ಲಿ ದ್ವಿಜರ ಧರ್ಮಗಳು ಇರಬೇಕಾದ ರೀತಿಯಲ್ಲಿರಲು ಶಕ್ಯವಿಲ್ಲ. ಅಂದ ಮಾತ್ರಕ್ಕೇ ಅವರನ್ನು ನಿಂದಿಸುವದು ಯೋಗ್ಯವಲ್ಲವೆಂದು—

**ಯುಗೇಯುಗೇಚಯೇಧರ್ಮಾಃ**
**ತತ್ರತತ್ರಚಯೇದ್ವಿಜಾಃ ||**

**ತೇಷಾಂನಿಂದಾನಕರ್ತವ್ಯಾ**
**ಯುಗರೂಪಾಹಿತೇ ದ್ವಿಜಾಃ ||**

ಎಂಬದಾಗಿ ಸ್ಮೃತಿಕಾರರು ಎಚ್ಚರಿಸಿರುತ್ತಾರೆ. ಇರುವ ಸ್ಥಿತಿಯಿಂದ ಪ್ರಗತಿ ಮಾರ್ಗವನ್ನು ಹುಡುಕುವದು ಯಾವಾಗಲೂ ಎಲ್ಲರಿಗೂ ಯೋಗ್ಯಮಾರ್ಗವಾಗಿದೆ. ಇರಬೇಕಾದ ರೀತಿಯಲ್ಲಿಲ್ಲವೆಂದು ಹೇಡಿಗಳಾಗುವದೂ ಪರಸ್ಪರ ನಿಂದೆಮಾಡುವದೂ ದ್ವಿಜರ ಅವನತಿಗೆ ಕಾರಣವಾಗುತ್ತದೆ ಪ್ರಕೃತ—

**ವಿಶತ್ಯಾಶುಪಶುಭ್ಯಶ್ಚ**
**ಕೃಷ್ಯಾದಾನರುಚಿಃ ಶುಚಿಃ**
**ವೇದಾಧ್ಯಯನ ಸಂಪನ್ನಃ**
**ಸವೈಶ್ಯ ಇತಿಸಂಜ್ಞಿತಃ ||**

ಎಂಬ ವೈಶ್ಯಶಬ್ದನಿರ್ವಚನಾನುಸಾರ ವೈಶ್ಯರು ಪಶುಪಾಲನ ಕೃಷಿಕರ್ಮವಾಣಿಜ್ಯಗಳನ್ನು ಮಾಡಿಕೊಂಡು ವೇದಾಧ್ಯಯನ ಸಂಪನ್ನರಾಗಿ ಶುಚಿರ್ಭೂತರಾಗಿದ್ದರೆ ಮಹರ್ಷಿಪದವಿಯನ್ನು ಪಡೆದಂತಾಗುತ್ತದೆ. ಕನ್ಯಕಾದೇವಿಯ ಅಗ್ನಿಪ್ರವೇಶ ಕಾಲದಲ್ಲಿ ವೈಶ್ಯರು ತಮ್ಮ ಮೂರು ವೃತ್ತಿಗಳಲ್ಲಿ ಪಶುಪಾಲನೆ ಕೃಷಿಕರ್ಮಗಳನ್ನು ಶೂದ್ರರಿಗೆ ದಾನಮಾಡಿದಕಾರಣ ವಾಣಿಜ್ಯವೊಂದೇ ಅವರ ಮುಖ್ಯವೃತ್ತಿಯಾಗಿರುತ್ತದೆ. ವಾಣಿಜ್ಯವನ್ನೂ ವೇದಾಧ್ಯಯನವನ್ನೂ ಮಾಡಿಕೊಂಡು ಧರ್ಮಾತ್ಮರಾಗಿರುವದು ಈ ಕಾಲದಲ್ಲಿ ವೈಶ್ಯರಿಗೇನೂ ಶ್ರಮಸಾಧ್ಯವೆನಿಸುವದಿಲ್ಲ.

ಸ್ವಧರ್ಮವನ್ನು ತ್ಯಜಿಸಿ ಪರಧರ್ಮಾವಲಂಬನೆಮಾಡಿ ಬ್ರಾಹ್ಮಣರು ಹೀನದೀನರಾದಂತೆ ವೈಶ್ಯರಾಗದಿರುವದು ಸಂತೋಷದ ಸಂಗತಿ. ಸ್ವಧರ್ಮದಲ್ಲಿರುವದರಿಂದ ಆರ್ಥಿಕದೃಷ್ಟಿಯಿಂದ ವೈಶ್ಯರು

ಬ್ರಾಹ್ಮಣರಿಗಿಂತ ಉತ್ತಮ ಸ್ಥಿತಿಯಲ್ಲಿದ್ದಾರೆ. ರಾಜವಿದ್ಯೆಯನ್ನು ಕಲಿತು ರಾಜಾಶ್ರಯದಿಂದ (ನೌಕರಿ) ಬದುಕಬೇಕೆಂಬಷ್ಟು ದುರ್ಗತಿ ವೈಶ್ಯರವಾಗಿಲ್ಲ. ವ್ಯವಹಾರನಿರ್ವಾಹಕ್ಕೆ ವೈಶ್ಯರು ರಾಜವಿದ್ಯೆಯನ್ನು ಕಲಿಯಬಹುದು. ಆ ವಿದ್ಯಾಬಲದಿಂದ ಪಾಶ್ಚಾತ್ಯರಂತೆ ದೊಡ್ಡ ದೊಡ್ಡ ವಾಣಿಜ್ಯ ಸಂಸ್ಥೆಗಳನ್ನೇರ್ಪಡಿಸಿಕೊಳ್ಳಬಹುದು. ಸಾವಿರಾರು ಜನರಿಗೆ ಜೀವನವನ್ನು ಕಲ್ಪಿಸಿಕೊಡುವದರ ಮೂಲಕ ತಾವೂ ಶ್ರೀಮಂತರಾಗಬಹುದು. ಈ ವಿಧವಾದ ಅನುಕೂಲವು ವೈಶ್ಯರಿಗಿದ್ದಂತೆ ಇತರರಿಗಿಲ್ಲ.

ಸಾರಾಂಶದ ಮಾತಿದು. ವೈಶ್ಯರು ತಮ್ಮ ಪೂರ್ವಾಚಾರವನ್ನು ಬಿಡದೆ ತಮ್ಮ ಅಭಿವೃದ್ಧಿಗೆ ಯೋಗ್ಯರೀತಿಯಿಂದ ತಕ್ಕ ನಿಯಮಗಳನ್ನು ಮಾಡಿಕೊಂಡು, ಸ್ವವೃತ್ತಿಯನ್ನು ಪಾಲಿಸಿಕೊಂಡು, ಸ್ವಾವಲಂಬಿಗಳಾಗಿದ್ದರೆ, ಅವರ ಶ್ರೇಯಸ್ಸಿಗೆಂದಿಗೂ ಯಾರಿಂದಲೂ ಕೊರತೆಯುಂಟಾಗುವದಿಲ್ಲ. ದೇವಧರ್ಮಗಳ ಹೆಸರನ್ನೇ ಕಿತ್ತೊಗೆಯುವ ವಾಚಾಳರಾದ ಹೈತುಕರ ಗಾಳಿಮಾತ್ರ ವೈಶ್ಯರಿಗೆ ಬಡಿಯದಿರಬೇಕು. ವೈಶ್ಯವಂಶ ಪ್ರವರನಾದ ಶ್ರೀಕೃಷ್ಣಪರಮಾತ್ಮನ—

**ಯೇಯಥಾಮಾಂಪ್ರಪದ್ಯಂತೇ**
**ತಾಂಸ್ತಥೈವಭಜಾಮ್ಯಹಂ ||**
**ಮಮವರ್ತ್ಮಾನುವರ್ತಂತೇ**
**ಮನುಷ್ಯಾಃ ಪಾರ್ಥಸರ್ವಶಃ || ೧೧ ||** *IV.*

ತಾ || ಯಾರು ನನ್ನನ್ನು ಹೇಗೆ ಭಜಿಸುವರೋ ನಾನೂ ಅವರನ್ನು ಹಾಗೆಯೇ ಭಜಿಸುವೆನು. ಅರ್ಜುನನೆ! ಮನುಷ್ಯರೆಲ್ಲರೂ ನನ್ನ ಮಾರ್ಗವನ್ನೇ ಅನುಸರಿಸುವರು.

ಎಂಬ ಗೀತೋಕ್ತಿಯು ನಿರಂತರ ಮನನದಲ್ಲಿರಬೇಕು.

# ಇತರ ವಿಷಯಗಳು

ಗ್ರಂಥಾರಂಭದಲ್ಲಿ ಗಣಪತಿಯ ಪೂಜೆಮಾಡಿ ಗ್ರಂಥಕರ್ತನ ಮಾತೆಂಬ ಹೆಸರಿನಿಂದ ಮುನ್ನುಡಿಯನ್ನು ಬರೆದಂತೆ ಉತ್ತರ ಪೂಜೆಗೂ ಮತ್ತೊಂದು ನುಡಿಯನ್ನು ಮೇಲ್ಕಂಡ ಶಿರನಾಮೆಯಿಂದ ಬರೆಯಬೇಕಾಯಿತು. ಯಾವ ಕೆಲಸವನ್ನೂ ಆರಂಭಿಸದಿದ್ದರೆ ಅದರ ಸಂಬಂಧವಾದ ಯೋಚನೆ ಬರುವದಿಲ್ಲ. ಕಾರ್ಯಾರಂಭ ವಾದಾಗ ಅದು ಹೇಗೆ ಮುಕ್ತಾಯವಾದೀತೆಂಬ ಚಿಂತೆ ಬಲವಾಗುತ್ತದೆ. ಪಂಡಿತರು ಪುರಸ್ಕರಿಸುವರೇ, ಪಾಮರರಿಗೆ ಅರ್ಥವಾಗುವದೇ ಎಂಬ ಹಳವಳಿಯಾಗುತ್ತದೆ. ಪ್ರಕೃತ ಕನ್ನಡ ಕನ್ಯಕಾ ಪುರಾಣವಾದರೋ ಪೂರ್ತಿಯಾದಂತಾಯಿತು. ಮೇಲೆ ಸಂಸ್ಕೃತ ಶ್ಲೋಕಗಳನ್ನು ಬರೆದು ಅಡಿಯಲ್ಲಿ ತಾತ್ಪರ್ಯವನ್ನು ಕೊಡಬೇಕೆಂಬ ಭಾವನೆ ಮೊದಲು ನನಗಾಯಿತು. ಹಾಗೆ ಮಾಡಿದ್ದರೆ ಪುಸ್ತಕದ ಗಾತ್ರವೂ ಬೆಲೆಯೂ ಹೆಚ್ಚಾಗುತ್ತಿತ್ತು. ಬಹು ಜನ ಗ್ರಾಹಕರಿಗೆ ಅನಾನುಕೂಲವಾಗುತ್ತಿತ್ತು. ಆದ್ದರಿಂದ ಆ ಯೋಚನೆಯನ್ನು ಬಿಡಬೇಕಾಯಿತು.

ಕನ್ಯಕಾಪುರಾಣವೆಂದಕೂಡಲೆ ಅದೇನೋ ವೈಶ್ಯಮತ ಗ್ರಂಥ ವೆಂಬ ಭಾವನೆ ಜನತೆಯಲ್ಲಿ ಬಂದುಬಿಡುವದು. ಒಂದು ಪಂಗಡಕ್ಕೆ ಸಂಬಂಧಿಸಿದ ಗ್ರಂಥವಾದರೆತಾನೇ ಇತರರು ಅದನ್ನು ಓದಬಾರದೆಂಬ ನಿಯಮವಿಲ್ಲ. ಎಲ್ಲರೂ ಇತರರ ಆಚಾರ ವಿಚಾರ ಪದ್ಧತಿಗಳನ್ನು ತಿಳಿಯುವದು ಈ ಕಾಲದಲ್ಲಿ ಅತ್ಯಾವಶ್ಯಕ. ಅಂತಹ

ಉದಾರ ಭಾವನೆಯು ಭರತಖಂಡದ ಜನತೆಯಲ್ಲಿ ಬರುವದಕ್ಕೆ ಇನ್ನೂ ಬಹುಕಾಲ ಬೇಕು. ಅದುವರೆಗೆ ಈ ಪುಸ್ತಕದ ಒಡೆತನವು ವೈಶ್ಯರದೇ ಆದಂತಾಗುವದು. ವೈಶ್ಯರು ಪ್ರತಿಯೊಂದು ಮನೆಯಲ್ಲೂ ಒಂದೊಂದು ಪ್ರತಿಯನ್ನು ತೆಗೆದಿಟ್ಟುಕೊಂಡು ಗ್ರಂಥದ ಪ್ರಯೋಜನವನ್ನು ಪಡೆಯಬೇಕಾಗಿರುವದು.

ವೈಶ್ಯರಲ್ಲಿ ಸಂಸ್ಕೃತಾಭ್ಯಾಸವು ಬಹುಕಾಲದಿಂದ ಕಡಮೆಯಾಗುತ್ತಾ ಬಂದಿರುವದು. ಈಗೀಗ ಧರ್ಮಜಾಗೃತಿಯಾಗುತ್ತಿದ್ದರೂ ತಕ್ಕ ಪ್ರಮಾಣದಿಂದ ಸಂಸ್ಕೃತಾಭ್ಯಾಸ ನಡೆಯುತ್ತಿಲ್ಲ. ಆರ್ಯ ಸಂಸ್ಕೃತಿಗೆ ಸಂಸ್ಕೃತವು ಮೂಲವಾಗಿರುವದು. ಸಂಸ್ಕೃತವನ್ನು ಕಲಿಯದವನಲ್ಲಿ ಆರ್ಯಲಕ್ಷಣಗಳಿರುವದಿಲ್ಲ. ಅವನಲ್ಲಿ ವಾಕ್ಶುದ್ಧಿ ಇರುವದಿಲ್ಲ. ಬ್ರಾಹ್ಮಣರಲ್ಲಿ ಸಹ ಹತ್ತುಸಾವಿರಕ್ಕೊಬ್ಬನು ಸಂಸ್ಕೃತವನ್ನು ಕಲಿಯುತ್ತಿಲ್ಲ. ನಮ್ಮ ಧರ್ಮದ ಅವನತಿಗೆ ಗೀರ್ವಾಣ ಭಾಷಾಭ್ಯಾಸವಿಲ್ಲದಿರುವದು ಮುಖ್ಯಕಾರಣ. ಇಂಥಾ ಪರಿಸ್ಥಿತಿಯಲ್ಲಿ ಸಂಸ್ಕೃತದಲ್ಲಿರುವ ಪುರಾಣ ಚರಿತ್ರೆಯನ್ನು ಪ್ರತಿ ವೈಶ್ಯನೂ ಓದಿ ತಿಳಿಯುವದು ಸಾಧ್ಯವಲ್ಲ. ಜನ್ಮಭಾಷೆಯಾದ ಆಂಧ್ರದಲ್ಲಾಗಲಿ, ದೇಶಭಾಷೆಯಾದ ಕನ್ನಡದಲ್ಲಾಗಲಿ ವೈಶ್ಯರು ತಮ್ಮ ಕುಲಧರ್ಮವನ್ನು ತಿಳಿದುಕೊಳ್ಳಬೇಕಾಗಿರುವದು. ಆದ್ದರಿಂದ ಕನ್ನಡ ಕನ್ಯಕಾಪುರಾಣವು ಕರ್ನಾಟಕದ ಪ್ರತಿವೈಶ್ಯನ ಮನೆಯಲ್ಲೂ ಶೋಭಿಸಬೇಕೆಂದು ಗ್ರಂಥಕರ್ತನ ಆಸೆ.

ವೈಶ್ಯರಲ್ಲಿ ಸ್ವಾಭಾವಿಕವಾಗಿ ಪುರುಷರು ವ್ಯವಹಾರ ಕುಶಲರು. ವ್ಯವಹಾರ ನಿರ್ವಾಹದಲ್ಲಿ ಪರಮಾರ್ಥ ವಿಚಾರಮಾಡಲು ಸಮಯ ಸಾಲುವದಿಲ್ಲವೆಂದು ಕೆಲವರಿಗೆ ಸಂಶಯ. ಪುರಾಣದ ಅಧಿದೇವತೆಯು ಸ್ತ್ರೀರೂಪಳಾಗಿರುವಳು. ಕನ್ಯಕಾಪರಮೇಶ್ವರಿಯು ನಮ್ಮ ಕುಲ ದೇವತೆಯೆಂದು ಎಂತಹ ವೈಶ್ಯನಾದರೂ ಹೇಳುವನು. ಭರತ

ಖಂಡದಲ್ಲಿ ನಮ್ಮ ಧರ್ಮದ ಕೀರ್ತಿಯು ಅಳಿಸದಂತಿರುವದು ಇವತ್ತಿಗೂ ನಮ್ಮ ಸ್ತ್ರೀಯರಿಂದ ಆಧುನಿಕ ತರುಣಿಯರು ಈ ಕೀರ್ತಿಗೆ ಕಳಂಕ ತರದಿರಲೆಂದು ಮಾತ್ರ ಬೇಡಿಕೊಳ್ಳಬೇಕಾಗಿದೆ. ವೈಶ್ಯರಲ್ಲಿ ಪುರುಷ ರಂತೆ ಸ್ತ್ರೀಯರೂ ಮನೆಯನ್ನು ಬಿಟ್ಟು ಹೊರಗೆಹೋಗಿ ವ್ಯವಹಾರ ನಿರ್ವಾಹಮಾಡಿ ಜೀವಿಸುವ ಪರಿಸ್ಥಿತಿಯುಂಟಾಗಿಲ್ಲ. ಸ್ತ್ರೀಯರ ಕಾರ್ಯಕ್ಷೇತ್ರವು ಸ್ವಗೃಹವಾಗಿದೆ. ಆದ್ದರಿಂದ ಗೃಹಸ್ಥಳಾದ ಸಭ್ಯ ಸ್ತ್ರೀಯನ್ನು ಗೃಹಲಕ್ಷ್ಮಿಯೆಂದು ಕರೆಯುವ ಪರಿಪಾಠ ನಮ್ಮಲ್ಲಿದೆ. ಭಕ್ತಿಯು ಸ್ತ್ರೀಯರ ನಿಜಲಕ್ಷಣವೆನಿಸಿದೆ ಧರ್ಮ ವಿಚಾರಮಾಡಲು ಸ್ತ್ರೀಯರಿಗಿರುವಷ್ಟು ಅವಕಾಶ ಪುರುಷರಿಗಿಲ್ಲ. ಎಂತಹ ಬಡವೈಶ್ಯ ಕುಟುಂಬದಲ್ಲಾದರೂ ಶುಕ್ರವಾರದ ದೇವಿಯ ಪೂಜೆಯನ್ನು ಸ್ತ್ರೀ ಯರು ನಡೆಸದಿರುವದಿಲ್ಲ. ಪುರುಷನು ಯಾವದಿನ ತಪ್ಪಿದರೂ ಶುಕ್ರವಾರದ ರಾತ್ರಿ ಕನ್ಯಕಾಲಯಕ್ಕೆ ಹೋಗದಿರುವದಿಲ್ಲ. ಪ್ರತಿ ಕುಟುಂಬದಲ್ಲಿ ನಡೆಯುವ ಲಕ್ಷ್ಮೀ ಪೂಜಾಂಗವಾಗಿ ಕನ್ಯಕಾ ಪುರಾಣ ವನ್ನು ಪಠನೆಮಾಡುವುದು ಹೊಸ ಪದ್ಧತಿಯೆಂದಾಗಲಿ, ಕಠಿಣ ವೆಂದಾಗಲಿ ಅನಿಸುವದಿಲ್ಲ. ಸ್ತ್ರೀಪಾವಿತ್ರ್ಯದ ಪರಮಾವಧಿಯನ್ನು ತಿಳಿಸುವದು ಕನ್ಯಕಾಪುರಾಣ ಪುರುಷರಿಗಿಂತ ಸ್ತ್ರೀಯರು ಅತಿ ಮುಖ್ಯವಾಗಿ ಈ ಪುರಾಣವನ್ನು ವಾರಕ್ಕೊಮ್ಮೆ ಪಠಿಸಬೇಕು. ಅದ ರಿಂದ ದೇವಿಯ ಪ್ರೀತಿ. ಅದರಿಂದ ಚಿತ್ತಶುದ್ಧಿ. ಅದರಿಂದ ಐಶ್ವರ್ಯ ಪ್ರಾಪ್ತಿ. ಅದರಿಂದಲೇ ಮೋಕ್ಷ ಪ್ರಾಪ್ತಿ.

ಈ ಕೋರಿಕೆಯನ್ನು ವೈಶ್ಯ ಭಗಿನಿಯರು ನಡೆಸುವರಾದರೆ, ಅವರಿಂದ ಲೇಖಕನಿಗೂ ಕಿಂಚಿತ್ಪುಣ್ಯ ಪ್ರಾಪ್ತಿಯಾಗುವದು. ಗ್ರಂಥವನ್ನು ಬರೆದ ಉದ್ದೇಶವು ಸಫಲವಾಗುವದು.

ಈ ಗ್ರಂಥವನ್ನು ಬರೆಯಬೇಕೆಂದು ಲೇಖನಿಯನ್ನು ಹಿಡಿ ದಾಗ—ಗ್ರಂಥವು ಆದಷ್ಟು ಸಂಗ್ರಹವಾಗಬೇಕು; ಎರಡು ಘಂಟೆ

ಗಳೊಳಗೆ ಓದಿ ಮುಗಿಸುವಂತಿರಬೇಕು; ವರ್ಣನೆಗಳು ಕಡಮೆಯಾಗ ಬೇಕು; ಕನ್ನಡ ಪದ್ಧತಿಗನುಸರಿಸಿ ಸುಲಲಿತ ಶೈಲಿಯಾಗಬೇಕು; ಎಂಬುದು ನನ್ನ ಮುಖ್ಯಧ್ಯೇಯವಾಗಿದ್ದಿತು. ಬರೆದನಂತರ ಪುಸ್ತಕದ ಪುನರಾವಲೋಕನ ಮಾಡಿದೆನು. ಅಲ್ಲಲ್ಲಿ ಸಂಸ್ಕೃತ ಕ್ಲಿಷ್ಟಪದ ಗಳಿರುವಂತೆ ಕಾಣಿಸಿತು. ಆ ಸ್ಥಳಗಳಲ್ಲಿ ಸುಲಭ ಕನ್ನಡ ಶಬ್ದಗಳನ್ನು ಜೋಡಿಸಬೇಕೆಂದು ನೋಡಿದೆನು. ಮಾತಿನಲ್ಲಿ ಗಾಂಭೀರ್ಯವೂ ವಾಕ್ಯದಲ್ಲಿ ಬಂಧುರತೆಯೂ ಕಡಮೆಯಾಗುವಂತೆ ತೋರಿತು. ಆದ್ದರಿಂದ ಇದ್ದಂತೆ ಇರಲೆಂದೂ, ಓದುವ ಧಾಟಿಯಲ್ಲಿ ಕ್ಲಿಷ್ಟ ಶಬ್ದಗಳು ತಾವೇ ಅರ್ಥವಾಗುವುವೆಂದೂ ಬಿಟ್ಟುಬಿಟ್ಟೆನು.

ಕೆಲ ಕೆಲ ವರ್ಣನೆಗಳು ಬಂದೆಡೆಯಲ್ಲಿ ಬಹುಮಟ್ಟಿಗೆ ಸಂಕೋಚಮಾಡಿದೆನು. ಒಂದೇಕಡೆ ಒಂದೇತರದ ವನವರ್ಣನೆ ನಗರ ವರ್ಣನೆಗಳು ಎರಡು ಸಲ ಬಂದವೆಂದು ವಾಚಕರಿಗೆ ಬೇಸರವಾಗಬಹುದೆಂದು ಮತ್ತೆ ತೋರಿತು. ಮೂಲಗ್ರಂಥದಲ್ಲಿ ವರ್ಣಿಸಿರುವುದನ್ನು ನೋಡಿದರೆ ಕನ್ನಡಿಸಿರುವುದು ಸಾಲದೆಂದು ತೋರಿತು ಸಾಧಾರಣವಾಗಿ ಪುರಾಣಗಳಲ್ಲಿ ಗಿರಿ, ವನ, ನದಿ, ಸಮುದ್ರ, ನಗರ, ಸ್ತ್ರೀ ವಿಚಾರಗಳು ಬಂದಕೂಡಲೇ ವಿಸ್ತಾರವಾದ ವರ್ಣನೆಯು ನೂರಾರು ಶ್ಲೋಕರೂಪವಾಗಿ ಪ್ರವಾಹದಂತೆ ಬಂದುಬಿಡುವುದು. ಆ ಶ್ಲೋಕಗಳನ್ನು ಓದುವಾಗ ಆಗುವ ಆನಂದವು ಭಾಷಾಂತರಮಾಡಿದರೆ ಆಗುವುದಿಲ್ಲ. ಕಾರಣವೇನೆಂದರೆ—ಸಂಸ್ಕೃತವು ಪೂರ್ಣಭಾಷೆ; ಮಾತೃಭಾಷೆ; ಆದ್ದರಿಂದ ದೇವಭಾಷೆ. ಪುರಾಣಕರ್ತೃರು ಸರ್ವಜ್ಞರು. ಒಂದೊಂದು ವರ್ಣನೆಮಾಡುವಾಗಲೂ ಅವರು ಅದರ ಪರಮಾವಧಿಯನ್ನು ಮುಟ್ಟಿಸಿದರು. ಅಂತಹ ವರ್ಣನೆಗಳನ್ನು ಓದುವವರು ಆ ದೃಷ್ಟಿಯಿಂದ ಓದಬೇಕು.

ಇದರಮೇಲೆ ಪುರಾಣಗಳು ಸಾರ್ವಕಾಲಿಕ ಗ್ರಂಥಗಳು. ಅಜ್ಞಾಪ್ರಾಜ್ಞರಿಬ್ಬರಿಗೂ ಸಮಾನವಾದವುಗಳು. ವಿವಿಧಕಾಲ ವಿವಿಧಸ್ವಭಾವ ವಿವಿಧ ಅಭಿರುಚಿಯುಳ್ಳ ಜನರಿಗೆಲ್ಲಾ ಅನುಕೂಲವಾದವುಗಳು. ನಮ್ಮ ಕಾಲದ ಕೆಲವು ಸ್ವತಂತ್ರ ಗ್ರಂಥಗಳನ್ನು ನೋಡಿದರೆ ಒಂದೂ ಸಾರ್ವಕಾಲಿಕವಾಗಿ ನಿಲ್ಲುವಂತಿಲ್ಲ. ಆದುದರಿಂದ ಪ್ರಸಕ್ತ ಕನ್ನಡ ಪುರಾಣದಲ್ಲಿ ಒಂದೇತರದ ವರ್ಣನೆಯ ಸ್ವಲ್ಪ ಭಾಗವನ್ನು ವಾಚಕರು ಉದಾರಭಾವದಿಂದ ಪಠಿಸಬೇಕು.

---

# ಕನ್ಯಕಾಪುರಾಣ ವಿಷಯದಲ್ಲಿ ಕೆಲವು ಭಿನ್ನಾಭಿಪ್ರಾಯಗಳು

ವಾಚಕರ ಕರಗತವಾಗಿರುವ ಕನ್ನಡ ಕನ್ಯಕಾ ಪುರಾಣವು ಬ್ರಹ್ಮಾಂಡ ಪುರಾಣದ ಉತ್ತರ ಖಂಡಾಂತರ್ಗತವಾದ ಶಾಲಂಕಾಯನ ವೈಶ್ಯಸಂವಾದಾಖ್ಯಭವಿಷ್ಯತ್ಪ್ರಶಂಸೆಯಾಗಿರುವುದು. ಮಹಾದ್ರಿ ಮಹಾಕ್ಷೇತ್ರದಲ್ಲಿದ್ದ ಪುರಾತನ ವಾಲೆಗಳಿಂದ ಎಷ್ಟೋ ವರ್ಷಗಳ ಹಿಂದೆ ನಮ್ಮ ಪೂರ್ವೀಕರಿಂದ ಸಂಗ್ರಹೀತವಾದುದು. ಸಂಸ್ಕೃತಕ್ಕೂ ಕನ್ನಡಕ್ಕೂ ವ್ಯತ್ಯಾಸವಿರದ ಭಾಷಾಂತರವಾಗಿರುವುದು. ಈ ಸಂಗತಿಯನ್ನು ಹಿಂದೆಯೇ ತಿಳಿಸಿರುವೆನಷ್ಟೆ!

ಶ್ರೀಮಾನ್ ಆತ್ಕೂರಿ ಲಕ್ಷ್ಮೀನರಸಿಂಹಸೋಮಯಾಜಿ ಬಿ. ಎ. ಬಿ. ಎಲ್. ರವರ ಸಂಪಾದಕತ್ವದಲ್ಲಿ ಕ್ರಿ ಶ. ೧೯೨೨ರಲ್ಲಿ ಪ್ರಕಟವಾದ "ವೈಶ್ಯಧರ್ಮಪ್ರಕಾಶಿಕಾ" ಎಂಬ ಗ್ರಂಥದಲ್ಲಿ ಆಚಾರ್ಯತ್ರಯರ ಅವತಾರ ಕಥನ ಮಾಡಿದಂತೆ ಕನ್ಯಕಾವತಾರ ಚರಿತ್ರ ಕಥನವನ್ನೂ ಸಂಕ್ಷೇಪವಾಗಿ ಮಾಡಿರುವರು. ಅಧ್ಯಾಯಾಂತ್ಯದಲ್ಲಿ 'ಇತಿ ಶ್ರೀಗೌತ

ಮಪುರಿನಿಲಯ ಭಾಸ್ಕರಕವಿ ಪ್ರಣೀತಾಯಾಂ ವೈಶ್ಯಧರ್ಮ ಪ್ರಕಾಶಿಕಾಯಾಂ ಕನ್ಯಕಾ ಜನನಂ ನಾಮ ಇತ್ಯಾದಿ ರೀತ್ಯಾ................ ಅಧ್ಯಾಯಃ'' ಎಂಬದಾಗಿ ಉಲ್ಲೇಖವಿರುವುದು. ಗೌತಮಪುರಿನಿಲಯ ಭಾಸ್ಕರಕವಿಯೆಂದಕೂಡಲೇ ಕವಿಯನ್ನು ವೈಶ್ಯಾಚಾರ್ಯರಾದ ಭಾಸ್ಕರಾಚಾರ್ಯರೆಂದು ಯಾರಾದರೂ ಸಂದೇಹಿಸಲು ಅವಕಾಶವಿದೆ. ಹಾಗೆ ಸಂದೇಹಿಸಲು ಏನೂ ಕಾರಣವಿರುವುದಿಲ್ಲ. ಗೌತಮಪುರಿನಿಲಯ ಭಾಸ್ಕರಕವಿಯು ವೈಶ್ಯಧರ್ಮಪ್ರಕಾಶಿಕೆಯೆಂಬ ಗ್ರಂಥವನ್ನು ರಚಿಸಿದವನು. ಶಂಕರ ರಾಮಾನುಜ ಮಧ್ವ, ಕನ್ಯಕಾ ಈ ನಾಲ್ವರು ವಿಭೂತಿ ಪುರುಷರ ಚರಿತ್ರೆಯನ್ನೂ ಸಂಕ್ಷೇಪವಾಗಿ ವೈಶ್ಯಧರ್ಮ ಪ್ರಕಾಶಿಕೆಗೆ ಉಪಷ್ಟಂಭಕವಾಗಿ ರಚಿಸಿರುತ್ತಾನೆ. ಕನ್ಯಕಾದೇವಿಯ ಚರಿತ್ರೆಯನ್ನೇ ಬರೆಯುವುದು ಕವಿಯ ಪರಮಧ್ಯೇಯವಾಗಿದ್ದರೆ ವಿಸ್ತಾರವಾಗಿ ಬರೆದಿರಬಹುದಾಗಿತ್ತು. ಭಾಸ್ಕರಕವಿಯು ಕನ್ಯಕಾ ಚರಿತ್ರ ವಿಸ್ತಾರದಲ್ಲಿ ಪುರಾಣವನ್ನನುಸರಿಸಿ ಬರೆದಂತೆ ಕಂಡುಬರುವುದಿಲ್ಲ. ವಿಷ್ಣುವರ್ಧನ ರಾಜನ ಚರಿತ್ರೆಯನ್ನು ಬರೆಯುವಾಗ ರಾಜನಿಗಿದ್ದ ವಿಷ್ಣುದ್ವೇಷವನ್ನು ಬಲು ಸಂಕೋಚದಿಂದ ತಿಳಿಸಿದ್ದಾನೆ. ಕನ್ನಿಕೆಯು ಶ್ರೀಜನಾರ್ದನ ದೇವಾಲಯಕ್ಕೆ ಪುಷ್ಪಕೈಂಕರ್ಯಕ್ಕೆ ಹೋಗುತ್ತಿದ್ದಾಗ ವಿಷ್ಣುವರ್ಧನನು ಆಕೆಯನ್ನು ಮೋಹಿಸಿದ ಕಥೆಯನ್ನೂ ಬರೆದಿದ್ದಾನೆ. ತನಗಿದ್ದ ದೇವತಾ ಭಕ್ತಿಯನ್ನನುಸರಿಸಿ ಕನ್ನಿಕೆಯನ್ನು ನಗರೇಶ್ವರನಿಗೆ ವಿವಾಹಮಾಡಿಸಿದ್ದಾನೆ. ಅನೇಕ ಪುರಾಣ ಶ್ಲೋಕಗಳನ್ನು ಇದ್ದಂತೆ ತನ್ನ ಗ್ರಂಥದಲ್ಲಿ ಸೇರಿಸಿದ್ದಾನೆ. ಅಗ್ನಿಪ್ರವೇಶಕಾಲದಲ್ಲಿ ಅಮ್ಮನವರಿಂದ ಆದ ಹವ್ಯವಾಹನ ಸ್ತೋತ್ರದ ಶ್ಲೋಕಗಳು ಕೇವಲ ಪುರಾಣ ಶ್ಲೋಕಗಳೇ ಆಗಿವೆ ಗ್ರಂಥಕರ್ತನ ಪರಮಧ್ಯೇಯವು ಪ್ರತ್ಯೇಕವಾಗಿದ್ದುದರಿಂದ ಈ ವ್ಯತ್ಯಾಸಗಳನ್ನು ಎಣಿಸುವದಾಗಲಿ, ಕವಿಯ ಮಾತಿಗೆ ಪುರಾಣವಾಕ್ಯ ವಿರೋಧವಾಗಿದೆಯೆಂದು ವಿಚಾರಮಾಡುವುದಾಗಲಿ

ಯೋಗ್ಯವೆನಿಸುವುದಿಲ್ಲ. ವೈಶ್ಯಧರ್ಮಪ್ರಕಾಶಿಕೆಯ ಸಂಪಾದಕರಾದ ಶ್ರೀ ಆತ್ಮೂರಿ ಲಕ್ಷ್ಮೀನೃಸಿಂಹಸೋಮಯಾಜಿಗಳು ವೈಶ್ಯಮಹಾ ಜನರ ವೈದಿಕತ್ವಕ್ಕೆ ಬಾಧೆಬಂದುದನ್ನು ನೋಡಿ ಅವರ ದ್ವಿಜತ್ವ ವನ್ನು ಶಾಸ್ತ್ರಪ್ರಮಾಣಗಳಿಂದ ಸಾಧಿಸಲು ಹೊರಟವರಲ್ಲದೆ ಪುರಾಣ ಕಥೆಗೂ ಭಾಸ್ಕರಕವಿಯ ಕಾವ್ಯಕ್ಕೂ ವ್ಯತ್ಯಾಸವೇನಿದೆಯೆಂದು ಶೋಧಿಸಲು ಹೊರಟವರಲ್ಲ ವೈದಿಕ ಲೌಕಿಕ ವ್ಯವಹಾರಗಳನ್ನರಿತ ವರಾಗಿ, ರಾಜಮಾನ್ಯರಾಗಿ, ಯಜ್ಞಾದಿಗಳನ್ನು ನಿರ್ವಿಘ್ನವಾಗಿ ನೆರ ವೇರಿಸಿ ಸೋಮಯಾಜಿಗಳೆಂಬ ಪುಣ್ಯನಾಮದಿಂದ ಅಲಂಕೃತರಾಗಿ, ಇನ್ನೂ ಬಹುಕಾಲ ವೈಶ್ಯಸಮಾಜದ ಸೇವೆಮಾಡಲು ಆಯುಷ್ಮಂತ ರಾಗಿರಲಿಲ್ಲವೆಂದು ಮಾತ್ರ ವಿಷಾದಿಸಬೇಕಾಗಿದೆ.

ಆದುದರಿಂದ ನಮ್ಮ ವೈಶ್ಯ ಬಂಧು ಭಗಿನಿಯರು ಬ್ರಹ್ಮಾಂಡ ಪುರಾಣಾಂತರ್ಗತ ಕಥೆಗೂ ಭಾಸ್ಕರ ಕವಿಯ ಮಾತಿಗೂ ವ್ಯತ್ಯಾಸ ಬಂದಿದೆಯೆಂದು ಚಿಂತಿಸಲು ಕಾರಣವಿಲ್ಲ. ಕವಿಯ ಮಾತಿಗಿಂತ ಪುರಾಣವಾಕ್ಯವು ಪ್ರಮಾಣಭೂತವಾದುದಷ್ಟೆ! ಇನ್ನು, ಕೆಲವು ವೈಶ್ಯ ಜನರಾಚರಿಸುತ್ತಿರುವ ಮತ್ತು ಬಲುಕಾಲದಿಂದ ಹೇಳಿಕೇಳಿದ ಕಥೆಗಳಿಂದಲೂ, ವೈಶ್ಯರು ಎಲ್ಲಿ ನೋಡಿದರೂ ನಗರೇಶ್ವರ ಕನ್ಯಕಾ ದೇವಿಯರ ದೇವಾಲಯಗಳನ್ನು ಪ್ರತಿಷ್ಠಿಸಿದಂತೆ ಜನಾರ್ದನ ದೇವಾ ಲಯ ಪ್ರತಿಷ್ಠೆ ಮಾಡದಿರುವದರಿಂದಲೂ, ಪುರಾಣ ಕಥೆಯನ್ನು ನವೀನವಿದೆಂದು ಭಾವಿಸಲು ಅವಕಾಶವಾಗಬಹುದು ಈ ತರದ ಭಾವನೆ ಬರುವದಕ್ಕೂ ಅವಕಾಶವಿರುವದಿಲ್ಲ. ಏಕೆಂದರೆ ಕನ್ಯಕಾ ವತಾರವು ಶಂಕರರಾಮಾನುಜಮಧ್ವ ಈ ಆಚಾರ್ಯತ್ರಯರ ಅವತಾರ ಕ್ಕಿಂತ ಎಷ್ಟೋ ಹಿಂದಿನ ಕಾಲದಲ್ಲಾದದ್ದು. ಬ್ರಾಹ್ಮಣ ಮತಗಳ ವೈವಿಧ್ಯಕ್ಕೂ ವೈಶ್ಯರಿಗೂ ಏನೂ ಸಂಬಂಧವಿರುವದಿಲ್ಲ, ಆಚಾರ್ಯ ತ್ರಯರಿಗಿಂತ ಹಿಂದಿನ ಕಾಲದಲ್ಲಿ ವೇದಮತವು ಯಾವ ಅದ್ವೈತ,

ವಿಶಿಷ್ಟಾದ್ವೈತ, ದ್ವೈತ ಎಂಬ ಹೆಸರಿನಿಂದ ಕರೆಸಿಕೊಂಡಿತ್ತೋ ಐತಿಹಾಸಿಕವಾಗಿ ನಿರ್ಧರಿಸಲು ಸಾಧ್ಯವಿಲ್ಲ. ಆಚಾರ್ಯತ್ರಯರ ಅವತಾರಾನಂತರ ಬ್ರಾಹ್ಮಣರಂತೆ ವೈಶ್ಯರೂ ಆಯಾ ಧರ್ಮಗಳನ್ನನುಸರಿಸಬೇಕೆಂದು ಮಾತ್ರ ಹೇಳಲು ಸಾಧ್ಯವಿದೆ. ಯಾವ ಧರ್ಮವನ್ನನುಸರಿಸಿದರೋ ಆ ಪುಂಡ್ರ ಆ ಸಂಪ್ರದಾಯಗಳ ಆಚರಣೆಗೆ ಬರುವದು ಸ್ವಾಭಾವಿಕ. ವೈಶ್ಯರಲ್ಲಿ ಮೂರು ಮತಗಳ ಆಚರಣೆ ಇರುವುದು ಈಗಲೂ ಇದಕ್ಕೆ ಸಾಕ್ಷೀಭೂತವಾಗಿದೆ. ಪುರೋಹಿತರನುಸರಿಸಿದ ಮತಾನುಸಾರ ವೈಶ್ಯರ ಆಚರಣೆಗಳು ನಿರ್ವಿವಾದವಾಗಿ ಬಂದುಬಿಟ್ಟಿವೆ. ಇಷ್ಟುಮಾತ್ರದಿಂದ ಪುರಾಣಗಳನ್ನು ನಂಬದಿರುವದು ಯಾರಿಗೂ ಸಾಧ್ಯವಲ್ಲ. ನಿನ್ನೆಯ ದಿನದ ಆಚರಣೆಯು ಇಂದಿನ ದಿನಕ್ಕೆ ಪುರಾತನವೆನಿಸುತ್ತದೆ ; ಸಂಪ್ರದಾಯವೆನಿಸುತ್ತದೆ. ಹತ್ತಿಪ್ಪತ್ತು ವರ್ಷಗಳ ಹಿಂದೆ ಯಾರೋ ವೈಶ್ಯರಿಗೆ ವೇದಾಧಿಕಾರವಿಲ್ಲವೆಂದ ಮಾತ್ರಕ್ಕೆ, ಆ ಹತ್ತಿಪ್ಪತ್ತು ವರ್ಷಗಳ ಕಾಲವು ಈ ಹೊತ್ತಿಗೆ ಪೂರ್ವಕಾಲವೆನಿಸಿದ ಮಾತ್ರಕ್ಕೆ, ಅದರಂತೆ ವೈಶ್ಯರು ನಡೆಯುವರೇನು ? ಆದರಂತೆ ಎಲ್ಲ ವಿಷಯಗಳನ್ನೂ ಚಿಕಿತ್ಸಕ ಬುದ್ಧಿಯಿಂದ ವಿಚಾರಿಸಬೇಕೆಂದು ಮಾತ್ರ ಲೇಖಕನ ಸವಿನಯ ಪ್ರಾರ್ಥನೆಯಿದೆ.



# ಕನ್ಯಕಾ ಪರಮೇಶ್ವರಿಯ ಜೊತೆಯಲ್ಲಿ ಅಗ್ನಿ ಪ್ರವೇಶಮಾಡಿದ ದಂಪತಿಗಳ ಹೆಸರು

---

ದೇವಿಯ ಜೊತೆಯಲ್ಲಿ ಧರ್ಮರಕ್ಷಣೆಗಾಗಿ ಪ್ರಾಣಾರ್ಪಣೆಗೈದ ಪುಣ್ಯಶ್ಲೋಕರ ನಾಮಸ್ಮರಣೆಯು ಪುಣ್ಯಕರವೆಂದು ಆ ಮಹಾನುಭಾವರ ಹೆಸರುಗಳನ್ನು ವೈಶ್ಯಧರ್ಮ ಪ್ರಕಾಶಿಕೆಯಲ್ಲಿ ಕೊಟ್ಟಿರುವ ರೀತ್ಯಾ ಇಲ್ಲಿ ಉದಹರಿಸಿದೆ:—

| ಸ್ತ್ರೀಯರ ಹೆಸರು | | ಪುರುಷರ ಹೆಸರು |
|---|---|---|
| ೧ ಕಾವೇರೀ (ಕುಸುಮಾಂಬಾ) | — | ೧ ವಾಸವ (ಕುಸುಮಶ್ರೇಷ್ಠಿ) |
| ೨ ಅಭಿರಾಮಾ | — | ೨ ರಾಮಃ |
| ೩ ಬ್ರಹ್ಮಾಂಬಾ | — | ೩ ಬಾಲಾಖ್ಯಃ |
| ೪ ರಾಜಮುಖೀ | — | ೪ ರಾಜಾಖ್ಯಃ |
| ೫ ರಾಜ್ಯಲಕ್ಷ್ಮೀಃ | — | ೫ ದ್ರವಿಣರಾಜಃ |
| ೬ ಸಮದರ್ಶಿನೀ | — | ೬ ಸೋಮದಃ |
| ೭ ಉತ್ಪಲಾಕ್ಷೀ | — | ೭ ಕೀರ್ತಿಕಾಮಃ |
| ೮ ಭೀಮಾಂಬಾ | — | ೮ ಪೃಥ್ವೀಶಃ |
| ೯ ಪುಷ್ಪಾಂಬಾ | — | ೯ ಭುವನಾಖ್ಯಃ |
| ೧೦ ಚಿತ್ರಭಾಷಿಣೀ | — | ೧೦ ಚಿತ್ರಶುಭಗಃ |
| ೧೧ ಬಾಲಾಮಣಿ | — | ೧೧ ಬಲದೇವಃ |
| ೧೨ ಪಲ್ಲವಾಂಬಾ | — | ೧೨ ಪಾಲಾಹ್ವಯಃ |

| ಸ್ತ್ರೀಯರ ಹೆಸರು | | ಪುರುಷರ ಹೆಸರು |
|---|---|---|
| ೧೩ ರಾಗಮಂಜರೀ | — | ೧೩ ರಾಗಾಖ್ಯಃ |
| ೧೪ ನಾರೀಮಣಿ | — | ೧೪ ನಾಗಾಖ್ಯಃ |
| ೧೫ ಧನಲಕ್ಷ್ಮೀಃ | — | ೧೫ ಧನದಃ |
| ೧೬ ರುಕ್ಮವತೀ | — | ೧೬ ಪಾವನಃ |
| ೧೭ ಚಂದ್ರಮುಖೀ | — | ೧೭ ಪೂತಾತ್ಮಾ |
| ೧೮ ಧರ್ಮಾಂಬಾ | — | ೧೮ ಉತ್ತಮಾಹ್ವಯಃ |
| ೧೯ ಅಮೃತಭಾಷಿಣೀ | — | ೧೯ ಗೌತಮಃ |
| ೨೦ ಪಲ್ಲವಾಂಬಾ | — | ೨೦ ಮಲ್ಲಾಖ್ಯಃ |
| ೨೧ ವಿಚಕ್ಷಣಾ | — | ೨೧ ದಕ್ಷಣಾಹ್ವಯಃ |
| ೨೨ ಚಂದ್ರರೇಖಾ | — | ೨೨ ಶೃಂಗಃ |
| ೨೩ ಜಾಹ್ನವೀ | — | ೨೩ ಜಮದಗ್ನಿಃ |
| ೨೪ ಕಳಾವತೀ | — | ೨೪ ಚಂದ್ರಃ |
| ೨೫ ನೀಡಾಂಬಾ | — | ೨೫ ನಂದಃ |
| ೨೬ ಪಲ್ಲವಪಾಣೀ | — | ೨೬ ವಲ್ಲಭಃ |
| ೨೭ ಅನುಮಿತಾ | — | ೨೭ ಅನಂತಃ |
| ೨೮ ಪೋತಾಂಬಾ | — | ೨೮ ಭೋಗಾಖ್ಯಃ |
| ೨೯ ವಿಮಲಾ | — | ೨೯ ಕಂಪಿಲಃ |
| ೩೦ ಅಭಿನವಾಂಬಾ | — | ೩೦ ಅಮಲಃ |
| ೩೧ ತಾರಕಾ | — | ೩೧ ವಾಮನಃ |
| ೩೨ ಕನಕಾಂಗೀ | — | ೩೨ ಕುಮುದಃ |
| ೩೩ ಇಂದುಮುಖೀ | — | ೩೩ ವಿಂದಾಖ್ಯಃ |
| ೩೪ ಕಮಲಾ | — | ೩೪ ಗಜಸತ್ವಃ |
| ೩೫ ಚಂಚಲಾಕ್ಷೀ | — | ೩೫ ಪಾವನಃ |
| ೩೬ ಭ್ರಮರಾ | — | ೩೬ ದಂತುಃ |

| ಸ್ತ್ರೀಯರ ಹೆಸರು | | ಪುರುಷರ ಹೆಸರು |
|---|---|---|
| ೩೭ ಮಂಜುವಾಣೀ | — | ೩೭ ಸುಂದರಃ |
| ೩೮ ಅರ್ಕಾಂಬಾ | — | ೩೮ ಮಲ್ಲಾಖ್ಯಃ |
| ೩೯ ಕುಂದರದನಾ | — | ೩೯ ಗೋವಿಂದಃ |
| ೪೦ ಅಬ್ಜಮುಖೀ | — | ೪೦ ಜಾಮದಗ್ನಿಃ |
| ೪೧ ಕಮಲಾಕ್ಷೀ | — | ೪೧ ಸುಮಂದಃ |
| ೪೨ ಧರಣಿ | — | ೪೨ ಕುಮಾರಃ |
| ೪೩ ಹಲ್ಲಕಾಂಬಾ | — | ೪೩ ಪಾರ್ಥಿವಃ |
| ೪೪ ಧನಲಕ್ಷ್ಮೀ | — | ೪೪ ಧನಪಃ |
| ೪೫ ಲೋಲಾಂಬಾ | — | ೪೫ ಲೋಕಾಹ್ವಯಃ |
| ೪೬ ಕಮಲಾ | — | ೪೬ ಗೌರಾಖ್ಯಃ |
| ೪೭ ಸೌದಾಮಿನೀ | — | ೪೭ ಬಂಭರಃ |
| ೪೮ ಚಂದ್ರಕಳಾ | — | ೪೮ ಚಂದ್ರಮೌಳಿಃ |
| ೪೯ ತನುಮಧ್ಯಾ | — | ೪೯ ಧೃತಸತ್ವಃ |
| ೫೦ ಸುದರ್ಶಿನೀ | — | ೫೦ ಸಾದಾಖಃ |
| ೫೧ ಸುಬೋಧಿನೀ | — | ೫೧ ಸಿಂಹಸೇನಃ |
| ೫೨ ಮೋಹಿನೀ | — | ೫೨ ಪವಿತ್ರಪಾಣಿಃ |
| ೫೩ ಮೋಹನಾಂಗೀ | — | ೫೩ ಸುಂದರಃ |
| ೫೪ ಬಾಲಾ | — | ೫೪ ಜನಾರ್ದನ |
| ೫೫ ದಂಡವತೀ | — | ೫೫ ಅಮೃತಃ |
| ೫೬ ಸಮಶೀಲಾ | — | ೫೬ ಸಕಲಾಖ್ಯಃ |
| ೫೭ ಚಿತ್ರರೇಖಾ | — | ೫೭ ಕುಶಲಃ |
| ೫೮ ಭಾಮಾಮಣಿ | — | ೫೮ ಭಾಸ್ಕರಃ |
| ೫೯ ಮಣಿಮಂಜರೀ | — | ೫೯ ಆದಿತ್ಯಃ |
| ೬೦ ಧನವತೀ | — | ೬೦ ಧರ್ಮಾಖ್ಯಃ |

| ಸ್ತ್ರೀಯರ ಹೆಸರು | | ಪುರುಷರ ಹೆಸರು |
| --- | --- | --- |
| ೬೧ ಶ್ಯಾಮಲಾ | — | ೬೧ ಕೃಷ್ಣಃ |
| ೬೨ ಸರಸ್ವತೀ | — | ೬೨ ಸರಸಃ |
| ೬೩ ಕಾಳೀ | — | ೬೩ ಕಾಲಕಂಠಃ |
| ೬೪ ಹೇಮರೇಖಾ | — | ೬೪ ಸ್ವರ್ಣರಥಃ |
| ೬೫ ಮಣಿಶಲಾಕಾ | — | ೬೫ ಕಂದರ್ಪಃ |
| ೬೬ ಮೇಧಾಂಬಾ | — | ೬೬ ಮಾರ್ಕಾಂಡೇಯಃ |
| ೬೭ ಪೃಥ್ವೀ | — | ೬೭ ಪೃಥುನಾಮಾ |
| ೬೮ ಧನದಾ | — | ೬೮ ಮೂಲಾಖ್ಯಃ |
| ೬೯ ಸೋಲ್ಲಾಸಿನೀ | — | ೬೯ ಪುಣ್ಯರಾಶಿಃ |
| ೭೦ ಬಿಂಬಾಧರೀ | — | ೭೦ ಪೀನವಕ್ಷಃ |
| ೭೧ ಪಲ್ಲವಾಂಬಾ | — | ೭೧ ಭೋಗಾಖ್ಯಃ |
| ೭೨ ಹೇಮಾಂಗೀ | — | ೭೨ ಮತ್ಸ್ಯಧ್ವಜಃ |
| ೭೩ ದೇವಾಂಬಾ | — | ೭೩ ಭೋಗಾಖ್ಯಃ |
| ೭೪ ಇಭಯಾನಾ | — | ೭೪ ನಾಗಾಖ್ಯಃ |
| ೭೫ ಧೂಮಾಂಬಾ | — | ೬೫ ಬ್ರಹ್ಮಾಖ್ಯಃ |
| ೭೬ ವಿದುರಾ | — | ೭೬ ಮಾಧವಃ |
| ೭೭ ಸೋಮಪ್ರಭಾ | — | ೭೭ ಸಿಂಹಧ್ವಜಃ |
| ೭೮ ಕಂಬುಕಂಠೀ | — | ೭೮ ಕಪಿಲಃ |
| ೭೯ ವಾಸಂತಿಕಾ | — | ೭೯ ಅರ್ಧನಾರೀಶಃ |
| ೮೦ ಪಿಪ್ಪಲಾಂಬಾ | — | ೮೦ ನಾಗಧ್ವಜಃ |
| ೮೧ ಮಂಜುವಾಣೀ | — | ೮೧ ಗುಣಪುಂಜಃ |
| ೮೨ ನೀಲವೇಣೀ | — | ೮೨ ಭಾನುಮಂತ |
| ೮೩ ಕೃಷ್ಣಾಂಬಾ | — | ೮೩ ನಾಗಾಹ್ವಯಃ |
| ೮೪ [illegible]ಷೃಧಾಮಾ | — | ೮೪ ವಿದ್ಯಾಲಃ |

| ಸ್ತ್ರೀಯರ ಹೆಸರು | | ಪುರುಷರ ಹೆಸರು |
|---|---|---|
| ೮೫ ಪ್ರಭಾವತೀ | — | ೮೫ ಪದ್ಮನಾಭಃ |
| ೮೬ ನವನೀತಾಂಗೀ | — | ೮೬ ವಿನ್ನಾಖ್ಯಃ |
| ೮೭ ವಿನ್ನಾಂಬಾ | — | ೮೭ ವಿಶ್ವನಾಥಃ |
| ೮೮ ಮೇಧಾಂಬಾ | — | ೮೮ ವೀರಭದ್ರಃ |
| ೮೯ ಗಂಗಾಂಬಾ | — | ೮೯ ವಿದ್ಯಾಖ್ಯಃ |
| ೯೦ ಚಿತ್ರಾಂಗಿ | — | ೯೦ ವಿನ್ನಃ |
| ೯೧ ಸುಂದರೀ | — | ೯೧ ಜೀಮೂತಃ |
| ೯೨ ರಾಜಮುಖೀ | — | ೯೨ ರಾಜೇಶ್ವರಃ |
| ೯೩ ಉತ್ಪಲಾಕ್ಷೀ | — | ೯೩ ಪಂಡಿತಃ |
| ೯೪ ಪದ್ಮಗಂಧಿ | — | ೯೪ ಬಾಲಭಾನುಃ |
| ೯೫ ಸತ್ಯವತೀ | — | ೯೫ ಸತ್ಯಸಂಧಃ |
| ೯೬ ಚಂದ್ರಾಂಬಾ | — | ೯೬ ಜಲದಃ |
| ೯೭ ಪಾವನೀ | — | ೯೭ ಚಂದ್ರಬಾಣಃ |
| ೯೮ ಪದ್ಮಾಕ್ಷೀ | — | ೯೮ ಮೇಘನೇಶಃ |
| ೯೯ ಚಪಲಾಕ್ಷಿ | — | ೯೯ ಸಿಂಹಮುಖಃ |
| ೧೦೦ ಮಣಿಮಾಲಾ | — | ೧೦೦ ಘನಮುಖಃ |
| *೧೦೧ ದಾವನಿ | — | ೧೦೧ ನಿರ್ಜಲಸೇನಃ |



* ೧೦೨ಕ್ಕೆ ಪೂರ್ಣವಾಗಬೇಕಾದ ಸಂಖ್ಯೆಯಲ್ಲಿ ಒಂದುಮಾತ್ರ ಬಿಟ್ಟು ಹೋಗಿದೆ. ಗಣಪಾಲ ಎಂಬುವ ದಂಪತಿಗಳ ಹೆಸರು ಸೇರಿದರೆ ಸಂಖ್ಯಾಪೂರ್ಣವಾಗಬಹುದು. ಗಣಪಾಲನ ಹೆಸರನ್ನು ಬರೆದರೆ ಆತನ ಪತ್ನಿಯು ಹೆಸರೇನೆಂಬುವದು ತಿಳಿದುಬರುವುದಿಲ್ಲ. ಆದ್ದರಿಂದ ಇದ್ದಷ್ಟು ದೊರೆತಷ್ಟು ಮಾತ್ರ ತಿಳಿಸಲಾಗಿದೆ.

# ಮಂಗಳಾಶಾಸನ

---

ಸ್ವಸ್ತಿಪ್ರಜಾಭ್ಯಃ ಪರಿಪಾಲಯಂತಾಂ
ನ್ಯಾಯ್ಯೇನಮಾರ್ಗೇಣ ಮಹೀಂ ಮಹೀಶಾಃ
ಗೋಬ್ರಾಹ್ಮಣೇಭ್ಯಶ್ಶುಭಮಸ್ತುನಿತ್ಯಂ
ಲೋಕಾಸ್ಸಮಸ್ತಾಸುಖಿನೋಭವಂತು ||೧||

ಕಾಲೇವರ್ಷತುಪರ್ಜನ್ಯಃ
ಪೃಥಿವೀಸಸ್ಯಶಾಲಿನೀ
ದೇಶೋಯಂಕ್ಷೋಭರಹಿತಃ
ಬ್ರಾಹ್ಮಣಾಸ್ಸಂತುನಿರ್ಭಯಾಃ ||೨||

ಅಪುತ್ರಾಃಪುತ್ರಿಣಸ್ಸಂತು
ಪುತ್ರಿಣಸ್ಸಂತುಪೌತ್ರಿಣಂ
ಅಧನಾಸ್ಸಧನಾಸ್ಸಂತು
ಜೀವಂತುಶರದಾಂಶತಂ ||೩||



# ಶುದ್ಧಾಶುದ್ಧ ಪತ್ರಿಕೆ.

| ಪುಟ | ಪಙ್ತಿ | ಅಶುದ್ಧ | ಶುದ್ಧ |
|---|---|---|---|
| ೩ | ೨೪ | ಸಮಾಜ | ಸಮಾಜಿ |
| ೨೫ | ೨೪ | ಮುಖ | ಮುಖ್ಯ |
| ೪೭ | ೧ | ಗತೀರಿಕಂ | ಗತೀರಿತಂ |
| ೯೦ | ೧೭ | ಕನ್ನಿಕೆ ಕೊಡು ವದರಿಂದ | ಕನ್ನಿಕೆಯನ್ನು ಕೊಡುವದರಿಂದ |
| ೯೩ | ೯ | ಆ ಸಮಯಗಳಲ್ಲಿ | ಆಸಮಯಗಳಲ್ಲಿ |
| ೯೫ | ೧೮ | ಕೇಲಂ | ಕುಲಂ |
| ೧೨೪ | ೧೯ | ಹೋಮಮಾ | ಹೋಮಮಾಡಿ |
| ೧೨೭ | ೨೦ | ವೈಶರು | ವೈಶ್ಯರು |
| ೧೫೬ | ೨೩ | ವಾರಣೇತಿ | ವಾರುಣೇತಿ |
| ೧೬೩ | ೩ | ಸನಂದನಗೋತ್ರಃ | ಸನಂದನಸಗೋತ್ರಃ |
| ೧೬೪ | ೧೫ | ಸಾವಣಃ | ಸಾವರ್ಣಃ |
| ೧೬೯ | ೧೬ | ಚೇಗೊಡ್ಸಕುಲ | ಚೇಗೊಡ್ಡಕುಲ |
| ೧೭೧ | ೮ | ಗೌತರ್ಸ್ನ್ಯಮದೇತಿ | ಗಾತರ್ಸ್ನ್ಯಮದೇತಿ |
| ೧೭೩ | ೧೭ | ಪಾಲಕದಾಲ್ಭ್ಯೇತಿ | ಪಾಲಕದಾಲ್ಭ್ಯೇತಿ |
| ೧೯೩ | ೬ | ಆಚರಣೆಗೆ | ಆಚರಣೆ |